# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೨<br>Volume 152 | ಬೆಂಗಳೂರು, ಗುರುವಾರ, ಫೆಬ್ರವರಿ ೧೬, ೨೦೧೭ (ಮಾಘ ೨೭, ಶಕ ವರ್ಷ ೧೯೩೮)<br>Bengaluru, Thursday, February 16, 2017 (Magha 27, Shaka Varsha 1938) | ಸಂಚಿಕೆ ೭<br>Issue 7 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನೋಂದಣಿ ಮತ್ತು ಮುದ್ರಾಂಕ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಂ.ಉ.ನೋ.ಕ.ತೀ.ಸಿ.ವಿ.ಸಿ./11/2016-17,ದಿ:08-08-2016**

**ವಿಷಯ:** ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು , ಯೋಗಿನರಸೀಪುರ ಗ್ರಾಮದ , ಸ.ನಂ. 97/1 ರ ಭೂ ಪರಿವರ್ತಿತ ನಿವೇಶನಗಳ ಸರಾಸರಿ ಅಂದಾಜು ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿ ದರವನ್ನು ನಿಗಧಿಪಡಿಸಿರುವ ಬಗ್ಗೆ :

**ಉಲ್ಲೇಖ:** 1) ತೀರ್ಥಹಳ್ಳಿ ಉಪಸಮಿತಿ ನಡವಳಿ ಸಂಖ್ಯೆ ಉ.ನೋ.ಕ.ತೀ. ಸಿವಿಸಿ: 10/2016-17 ದಿ:17-06-2016 ಮತ್ತು ದಿ:20-07-2016.

**2) ಕೇಂದ್ರ ಮೌಲ್ಯ ಮಾಪನ ಸಮಿತಿ ಸಭೆಯ ನಡವಳಿ ಸಂಖ್ಯೆ: ಸಿವಿಸಿ: 13/2016-17, ದಿನಾಂಕ: 01-08-2016**

1. ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು, ಉಪ ನೋಂದಣಿ ಕಛೇರಿಯ ವ್ಯಾಪ್ತಿಯಲ್ಲಿ ಬರುವ ಯೋಗಿನರಸೀಪುರ ಗ್ರಾಮದ , ಸ.ನಂ. 97/1 ರ ಭೂ ಪರಿವರ್ತಿತ ನಿವೇಶನಗಳ ಸರಾಸರಿ ಅಂದಾಜು ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿ ದರವನ್ನು ನಿಗಧಿಪಡಿಸಿ ಹೊರಡಿಸಿದ ಉಲ್ಲೇಖ(1) ರ ಸಾರ್ವಜನಿಕ ಆಕ್ಷೇಪಣೆ/ಸಲಹೆ/ಸೂಚನೆಗಳಿಗಾಗಿ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ ದಿನಾಂಕ ದಿಂದ 15 ದಿನಗಳೊಳಗಾಗಿ ಆಕ್ಷೇಪಣೆ/ಸಲಹೆ/ಸೂಚನೆಗಳನ್ನು ಸಲ್ಲಿಸುವಂತೆ ದಿನಾಂಕ:04-07-2016 ರಂದು ತೀರ್ಥಹಳ್ಳಿ, ಉಪನೋಂದಣಿ ಕಛೇರಿಗಳಲ್ಲಿ ಪ್ರಕಟಿಸಲಾಗಿತ್ತು.
2. ಪರಿಷ್ಕೃತ ಮಾರ್ಗಸೂಚಿ ದರಪಟ್ಟಿಗಳನ್ನ ಸಾರ್ವಜನಿಕರಿಗೆ ಲಭ್ಯವಾಗಿರುವಂತೆ ಉಪನೋಂದಣಿ ಕಛೇರಿಗಳಲ್ಲಿ/ ಜಿಲ್ಲಾನೋಂದಣಿ ಕಛೇರಿಯಲ್ಲಿ ಸೂಕ್ತ ಕ್ರಮ ಕೈಗೊಳ್ಳಲಾಗಿತ್ತು. ಮೇಲಿನ ಉಲ್ಲೇಖದಲ್ಲಿ ನಡೆದ ಮೌಲ್ಯಮಾಪನ ಉಪ-ಸಮಿತಿಗಳ ಸಭೆಯಲ್ಲಿ ಸಾರ್ವಜನಿಕರಿಂದ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಸೂಚನೆಗಳನ್ನು ಕೂಲಂಕುಷವಾಗಿ ಸಂಬಂಧಿಸಿದ ಉಪ-ಸಮಿತಿಗಳಲ್ಲಿ ಪರಿಶೀಲಿಸಿ, ಸೂಕ್ತ ಕ್ರಮಜರುಗಿಸಿ ಈ ಬಗ್ಗೆ ಕ್ರಮವಹಿಸಿರುವ ವಿಷಯಗಳನ್ನು ಉಲ್ಲೇಖ(2) ರ ಕೇಂದ್ರ ಮೌಲ್ಯ ಮಾಪನ ಸಮಿತಿಯಲ್ಲಿ ಆಡಳಿತಾತ್ಮಕ ಅನುಮೋದನೆ ಪಡೆದು ಅಂತಿಮಗೊಳಿಸಲಾಗಿದೆ.
3. ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಸೆಕ್ಷನ್ 45-ಬಿ ಮತ್ತು ಕರ್ನಾಟಕ ಮುದ್ರಾಂಕ (ಆಸ್ತಿಯ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿಯ ಪರಿಷ್ಕರಣೆ ಮತ್ತು ಪ್ರಕಟಣೆಗಾಗಿ ಕೇಂದ್ರ ಮೌಲ್ಯ ಮಾಪನ ಸಮಿತಿಯ ರಚನೆ) ಅಧಿನಿಯಮಗಳು 2003ರ ಅಧಿನಿಯಮ 7(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೌಲ್ಯ ಮಾಪನ ಉಪ-ಸಮಿತಿಯು ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು, ಉಪ ನೋಂದಣಿ ಕಛೇರಿಯ ವ್ಯಾಪ್ತಿಯಲ್ಲಿ ಬರುವ ಯೋಗಿನರಸೀಪುರ ಗ್ರಾಮದ , ಸ.ನಂ. 97/1 ರ ಭೂ ಪರಿವರ್ತಿತ ನಿವೇಶನಗಳ ಸರಾಸರಿ ಅಂದಾಜು ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿ ದರವನ್ನು ನಿಗಧಿಪಡಿಸಿ ಪ್ರಕಟಿಸಲಾಗಿದೆ. ಈ ಅಧಿಸೂಚನೆಯು **ಕೇಂದ್ರ ಮೌಲ್ಯ ಮಾಪನ ಸಮಿತಿ ಸಭೆಯ ನಡವಳಿ ಸಂಖ್ಯೆ: ಸಿವಿಸಿ: 13/2016-17, ದಿನಾಂಕ: 01-08-2016 ರ ಪ್ರಕಾರ** ದಿನಾಂಕ: 02-08-2016 ರಿಂದ ಜಾರಿಗೆ ಬಂದಿರುತ್ತದೆ.
4. ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ಉಪ ನೋಂದಣಿ ಕಛೇರಿಗಳ ವ್ಯಾಪ್ತಿಯಲ್ಲಿ ಬರುವ ಯೋಗಿನರಸೀಪುರ ಗ್ರಾಮದ , ಸ.ನಂ. 97/1 ರ ಭೂ ಪರಿವರ್ತಿತ ನಿವೇಶನಗಳ ಸರಾಸರಿ ಅಂದಾಜು ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿ ದರವನ್ನು ನಿಗಧಿಪಡಿಸಿ ಅನುಬಂಧ 1 ರಲ್ಲಿ ಪ್ರಕಟಿಸಲಾಗಿದೆ.

**ನಾಗರಾಜ್ ನಾಯ್ಕ**

ಉಪನೋಂದಣಾಧಿಕಾರಿಗಳು ಹಾಗೂ ಕಾರ್ಯದರ್ಶಿ,

ಕೇಂದ್ರ ಮೌಲ್ಯಮಾಪನ ಉಪಸಮಿತಿ,

ತೀರ್ಥಹಳ್ಳಿ, ತಾಲ್ಲೂಕು ಶಿವಮೊಗ್ಗ ಜಿಲ್ಲೆ

| ಅನುಬಂಧ–01 | | | | | | |
|---|---|---|---|---|---|---|
| ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ಮಾರುಕಟ್ಟೆ ಉಪ ಸಮಿತಿಯು ನಿಗದಿಪಡಿಸಿರುವ ಗ್ರಾಮವಾರು ನಿವೇಶನ ಹಾಗೂ ಜಮೀನುಗಳ ಪರಿಷ್ಕೃತ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯದ ಮಾರ್ಗಸೂಚಿ ದರಪಟ್ಟಿ | | | | | | |
| ಕ್ರ. ಸಂ. | ಗ್ರಾಮ/ ರಸ್ತೆ/ ಪ್ರದೇಶದ ಹೆಸರು | ಕೃಷಿ ಜಮೀನು(ಪ್ರತಿ ಏಕರೆಗೆ ರೂಪಾಯಿಗಳಲ್ಲಿ) | | | ಸ್ಥಳೀಯ ಸಂಸ್ಥೆ /ಗ್ರಾಮಠಾಣ ವ್ಯಾಪ್ತಿಗೆ ಬರುವ ವಸತಿ ನಿವೇಶನಗಳು /ಪಂಚಾಯ್ತಿ ರಸ್ತೆಗೆ | ಸ್ಥಳೀಯ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದಿತ ಲೇಔಟ್‌ನ ವಸತಿ ನಿವೇಶನಗಳು /ಮುಖ್ಯ ರಸ್ತೆಗೆ |
| | | ಖುಷ್ಕಿ ದರ | ತರಿ ದರ | ಬಾಗಾಯ್ತು ದರ | ನಿವೇಶನ ದರ (ಪ್ರತಿ ಚ.ಮೀಟರ್‌ಗೆ ರೂಪಾಯಿಗಳಲ್ಲಿ) | |
| *1* | *2* | *3* | *4* | *5* | *6* | *7* |
| 1 | ಯೋಗಿನರಸೀಪುರ ಗ್ರಾಮದ ಸರ್ವೇ ನಂಬರ್ 97/1 ರ ಭೂ ಪರಿವರ್ತಿತ ನಿವೇಶನಗಳಿಗೆ | | | | | **900** |

**P.R. No37**

**SC. 25**

**ನಾಗರಾಜ್ ನಾಯ್ಕ**
ಉಪನೋಂದಣಾಧಿಕಾರಿಗಳು ಹಾಗೂ ಕಾರ್ಯದರ್ಶಿ,
ಕೇಂದ್ರ ಮೌಲ್ಯಮಾಪನ ಉಪಸಮಿತಿ,
ತೀರ್ಥಹಳ್ಳಿ, ತಾಲ್ಲೂಕು ಶಿವಮೊಗ್ಗ ಜಿಲ್ಲೆ
**ಉಪನೋಂದಣಾಧಿಕಾರಿ**
**ತೀರ್ಥಹಳ್ಳಿ**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ. ಬೆಂಗಳೂರು ಪ್ರಾಂತ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18**
**ದಾವಾ ಸಂಖ್ಯೆ ಜೆಆರ್‌ಬಿ/ಡಿಐಎಸ್/356/2016–17**

| **ವಾದಿ :** | **ಪ್ರತಿವಾದಿ :** |
|---|---|
| ಮೈಕೋ ಅಸೋಸಿಯೇಟ್ಸ್ | ಶ್ರೀ ಜಿ.ಕೃಷ್ಣಮೂರ್ತಿ, |
| ಹೌಸಿಂಗ್ ಕೋ–ಆಪರೇಟಿವ್ | ಬಿನ್ ಲೇಟ್ ಗಂಗಪ್ಪ, |
| ಸೊಸೈಟಿ ಲಿ., | ವಯಸ್ಸು ಸುಮಾರು 61 ವರ್ಷ, |
| ನಂ.290/2, "ಲಕ್ಷ್ಮಿ ಆರ್ಕೇಡ್", | ಪ್ರೊಪ್ರೈಟರ್, |
| 2ನೇ ಮಹಡಿ, ಸಿದ್ಧಯ್ಯ ರಸ್ತೆ, | ಶ್ರೀ ವಿನಾಯಕ ಬಿಲ್ಡರ್ಸ್ & ಡೆವಲಪರ್ಸ್, |
| ವಿಲ್ಸನ್ ಗಾರ್ಡನ್, | ನಂ.2/1, 1ನೇ ಮಹಡಿ, ಎಫ್–1, |
| ಬೆಂಗಳೂರು–560 027, | 18ನೇ ಕ್ರಾಸ್, ಮಲ್ಲೇಶ್ವರಂ, |
| ಇದರ ಕಾರ್ಯದರ್ಶಿ. | ಬೆಂಗಳೂರು–560 055. |

### ಕರ್ನಾಟಕ ಸಹಕಾರ ಸಂಘಗಳ ಕಾಯಿದೆಯ 1959 ಕಲಂ 103 (2) ರನ್ವಯ ಜಪ್ತಿ ಆದೇಶ ಸ್ಥಿರೀಕರಣ

ವಾದಿ ಸಹಕಾರ ಸಂಘವು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 70 (2)(ಇ) ರಡಿಯಲ್ಲಿ ದಾವೆಯನ್ನು ದಾಖಲಿಸಿ, ಪ್ರತಿವಾದಿಯಿಂದ ಶೇಕಡ 18 ರ ಬಡ್ಡಿಯೊಂದಿಗೆ ರೂ.17,57,87,000–00 ಗಳನ್ನು ವಸೂಲಿ ಮಾಡಿಕೊಳ್ಳಲ್ಲುನುವಾಗುವಂತೆ ಆದೇಶ ನೀಡಬೇಕೆಂದು ಪ್ರಾರ್ಥನೆ ಸಲ್ಲಿಸಿರುತ್ತಾರೆ. ಸದರಿ ದಾವಾ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ ಕಲಂ 103 ರಡಿಯಲ್ಲಿ ಪ್ರಮಾಣ ಪತ್ರದೊಂದಿಗೆ ಅರ್ಜಿಯನ್ನು ಸಲ್ಲಿಸಿ, ಪ್ರತಿವಾದಿಗೆ ಸಂಬಂಧಿಸಿದ ಷೆಡ್ಯೂಲ್ ಆಸ್ತಿಗಳಿಗೆ, ಆದೇಶಕ್ಕೆ ಪೂರ್ವ ಜಪ್ತಿ ಮಾಡಿ, ಆದೇಶ ಹೊರಡಿಸಬೇಕೆಂದು ಕೋರಿರುತ್ತದೆ. ವಾದಿಯ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ ಕಲಂ 70 ರ ದಾವೆಯನ್ನು ದಾಖಲು ಮಾಡಿಕೊಂಡು ಈ ದಾವಾ ಅರ್ಜಿಯೊಂದಿಗೆ ಸಲ್ಲಿಸಿರುವ ಕಲಂ 103 ರಡಿ ಪ್ರಮಾಣೀಕರಿಸಿದ ಅರ್ಜಿಯನ್ನು ವಿಚಾರಣೆಗೆ ಸ್ವೀಕರಿಸಲಾಯಿತು.

ವಾದಿ ಸಹಕಾರ ಸಂಘವು ತನ್ನ ಸದಸ್ಯರುಗಳಿಗೆ ನಿವೇಶನ ಹಂಚಿಕೆ ಮಾಡಲು ಅನುವಾಗುವಂತೆ ಕೃಷಿಯೇತರ ಭೂಮಿಯನ್ನು ಖರೀದಿ/ ವಶಪಡಿಸಿಕೊಂಡು, ಬಡಾವಣೆ ರಚಿಸಿಕೊಳ್ಳುವ ಉದ್ದೇಶವನ್ನು ಹೊಂದಿರುತ್ತದೆ.ಈ ಉದ್ದೇಶವನ್ನು ಕಾರ್ಯರೂಪಕ್ಕೆ ತರಲು ಅನುವಾಗುವಂತೆ ದಿನಾಂಕ 15–03–2013 ರಂದು ಪ್ರತಿವಾದಿಯೊಂದಿಗೆ ಒಪ್ಪಂದ ಮಾಡಿಕೊಳ್ಳಲಾಗಿರುತ್ತದೆ. ಈ ಒಪ್ಪಂದದನ್ವಯ ಪ್ರತಿವಾದಿಯು ಬಾನಂದೂರು ಗ್ರಾಮ,

ಬಿಡದಿ ಹೋಬಳಿ, ರಾಮನಗರ ತಾಲ್ಲೂಕು, ರಾಮನಗರ ಜಿಲ್ಲೆ, ಇಲ್ಲಿನ ವಿವಿಧ ಸರ್ವೆಸಂಖ್ಯೆಗಳಲ್ಲಿನ 65 ಎಕರೆ ಭೂಮಿಯನ್ನು ಖರೀದಿಸಿ, ಕೃಷಿಯೇತರ ಭೂಮಿಯನ್ನಾಗಿ ಪರಿವರ್ತಿಸಲು ಸಂಬಂಧಿಸಿದ ಪ್ರಾಧಿಕಾರಗಳಿಂದ ಸಂಘದ ಹೆಸರಿಗೆ ಅನುಮತಿ ಪಡೆಯುವುದು, ಬಡಾವಣೆ ರಚಿಸಲು ಸಂಬಂಧಿಸಿದ ಪ್ರಾಧಿಕಾರದ ನೀಲಿ ನಕ್ಷೆ, ಕಾರ್ಯಾದೇಶಗಳನ್ನು ಪಡೆಯುವುದು, ಖರೀದಿಸಿದ ಕೃಷಿಯೇತರ ಭೂಮಿಯಲ್ಲಿ ಸಿವಿಲ್ ಕಾಮಗಾರಿಗಳನ್ನು ಕೈಗೊಂಡು ಬಡಾವಣೆ ರಚಿಸುವುದು, ಸಂಘವು ಸೂಚಿಸಿದಂತೆ ವಿವಿಧ ಅಳತೆಯ ನಿವೇಶನಗಳನ್ನು ರಚನೆ ಮಾಡಿಕೊಡಲು ಪ್ರತಿವಾದಿಯು ಒಪ್ಪಂದ ಮಾಡಿಕೊಂಡಿರುತ್ತಾರೆ. ಈ ಒಪ್ಪಂದದ ಹಿನ್ನೆಲೆಯಲ್ಲಿ, ದಿನಾಂಕ21-12-2013 ರಂದು ಎರಡು (2) ನಾಮಿನೇಷನ್ ಅಗ್ರಿಮೆಂಟ್‌ಗಳನ್ನು ಮಾಡಿಕೊಂಡು, 28 ಎಕರೆ 28 ಗುಂಟೆ ಮತ್ತು 35 ಗುಂಟೆ ಒಟ್ಟು 29 ಎಕರೆ 23 ಗುಂಟೆ ಭೂಮಿಯನ್ನು ಭೂ ಮಾಲೀಕರುಗಳಿಂದ ಕ್ರಯಪತ್ರಗಳ ಮೂಲಕ ಖರೀದಿಸಿರುವುದಾಗಿ ಮತ್ತು ಭೂಮಾಲೀಕರು ಸಂಘಕ್ಕೆ ಸದರಿ ಭೂಮಿಯನ್ನು ಕ್ರಯಪತ್ರದ ಮೂಲಕ ಮಾರಾಟ ಮಾಡಲು ಒಪ್ಪಿರುವುದಾಗಿ ವಿವರಿಸಲ್ಪಟ್ಟಿರುತ್ತದೆ. ತದನಂತರ ದಿನಾಂಕ 23-07-2015 ರಂದು ನಾಮಿನೇಷನ್ ಕರಾರು ಮಾಡಿಕೊಂಡು, ಮೇಲೆ ವಿವರಿಸಿದ ಗ್ರಾಮದ ವಿವಿಧ ಸರ್ವೆ ಸಂಖ್ಯೆಗಳಲ್ಲಿ 18 ಎಕರೆ 20 ಗುಂಟೆ ಭೂಮಿಯನ್ನು ನೋಂದಾಯಿತ ಕ್ರಯಪತ್ರಗಳ ಮೂಲಕ ಭೂಮಾಲೀಕರು ಪ್ರತಿವಾದಿಗೆ ಮಾರಾಟ ಮಾಡಿದ್ದಾರೆಂದು ಮತ್ತು ಸಂಘದ ಹೆಸರಿಗೆ ಕ್ರಯಪತ್ರದ ಮೂಲಕ ಭೂಮಿಯ ವರ್ಗಾವಣೆ, ಹಕ್ಕು ಮತ್ತು ಒಡೆತನ ಮಾಡಿಕೊಡಲು ಭೂಮಾಲೀಕರು ಒಪ್ಪಿರುವುದಾಗಿ ವಿವರಿಸಲ್ಪಟ್ಟಿರುತ್ತದೆ.

ದಿನಾಂಕ 15-03-2013 ರ ಕ್ರಯಪತ್ರದ ಹಿನ್ನೆಲೆಯಲ್ಲಿ, ಪ್ರತಿವಾದಿಯು ಒಟ್ಟು ರೂ.31,75,00,000-00 ಗಳನ್ನು ವಿವಿಧ ದಿನಾಂಕಗಳಂದು ಪಡೆದಿರುವುದಾಗಿ ವಾದಿ ಸಂಘವು ವಿವರಿಸಿ. ದಿನಾಂಕ 15-03-2013 ಮತ್ತು ನಂತರದ ಪೂರಕ ಒಪ್ಪಂದಗಳನ್ವಯ, ಪ್ರತಿವಾದಿಯು ನಡೆದುಕೊಳ್ಳದೇ ಇರುವುದರಿಂದ, ಯೋಜನೆ ಅನುಷ್ಠಾನಗೊಳಿಸಲು ಪ್ರತಿವಾದಿಯು ವಿಫಲರಾಗಿರುತ್ತಾರೆಂದು ತಿಳಿಸಿ ದಿನಾಂಕ 20-09-2016 ರ ಪತ್ರದನ್ವಯ ಪ್ರತಿವಾದಿಯು ವೈಯಕ್ತಿಕ ಕಾರಣ ನೀಡಿ ಯೋಜನೆಯನ್ನು ಕೈ ಬೀಡಲಾಗಿರುತ್ತದೆ. ಪ್ರತಿವಾದಿಯು ಸಂಘದಿಂದ ಪಡೆದ ರೂ.31,75,00,000-00 ಗಳ ಪೈಕಿ, ರೂ.14,17,13,000-00 ಗಳನ್ನು ಮಾತ್ರ ಭೂಮಾಲೀಕರಿಗೆ ಪ್ರತಿವಾದಿಯು ಪಾವತಿಸಿ, ಮಿಕ್ಕುಳಿದ ರೂ.17,57,87,000-00 ಗಳನ್ನು ದಿನಾಂಕ 15-03-2013 ರ ಒಪ್ಪಂದದ ಪ್ರಕಾರ ಬಳಸದೇ, ತಮ್ಮ ಪತ್ನಿಯ ಹೆಸರಿನಲ್ಲಿ 16ನೇ ಕ್ರಾಸ್, 4ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು, ಇಲ್ಲಿನ ನಿವೇಶನ ಸಂಖ್ಯೆ 46 ರಲ್ಲಿ ವೈಭವಪೂರಿತವಾಗಿ ಸುಮಾರು ರೂ.3-00 ಕೋಟಿ ವೆಚ್ಚ ಮಾಡಿ ಮನೆ ಕಟ್ಟುತ್ತಿರುವುದಾಗಿ ತಿಳಿಸಿ ಅದರಂತೆ ಅಬ್ಬಿಗೆರೆ ಗ್ರಾಮಕ್ಕೆ ಸೇರಿದ ಸರ್ವೆ ಸಂಖ್ಯೆ 22 ರಲ್ಲಿ ಭಾಗಶಃ ಸಣ್ಣ ಕೊಠಡಿಯೊಂದರಲ್ಲಿ ನಡೆಸುತ್ತಿರುವ ವಿದ್ಯಾ ವಿಹಾರ ಇಂಟರ್‌ನ್ಯಾಷನಲ್ ಪಬ್ಲಿಕ್ ಸ್ಕೂಲ್‌ನಲ್ಲಿ ಸಂಘದಿಂದ ಪಡೆದ ಹಣವನ್ನು ಭೂಮಾಲೀಕರಿಗೆ ನೀಡದೇ, ಶಾಲೆಯ ಭವ್ಯ ಕಟ್ಟಡ ನಿರ್ಮಿಸಲು ಉಪಯೋಗಿಸುವ ಮೂಲಕ ವಾದಿ ಸಂಘದ ಆಸ್ತಿಯಲ್ಲಿ ಪ್ರತಿವಾದಿಯು ಕೊರತೆ ಉಂಟು ಮಾಡಿದ್ದಾರೆಂದು ವಿವರಿಸಿ. ಒಪ್ಪಂದಗಳನ್ವಯ, ಹೆಚ್ಚುವರಿಯಾಗಿ ಪಡೆದ ಹಣಕ್ಕೆ ಪ್ರತಿವಾದಿಯು ಬ್ಯಾಂಕ್ ಗ್ಯಾರಂಟಿ ನೀಡಿಲ್ಲವೆಂದು ವಿವರಿಸಿರುತ್ತಾರೆ. ಈ ಹಿನ್ನೆಲೆಗಳಲ್ಲಿ, ಕಲಂ 70 (2)(ಇ) ರನ್ವಯ ದಾವೆ ಸಲ್ಲಿಸಿ, ದಾವಾದೇಶ ಕೋರಲಾಗಿದೆ ಎಂದು ತಿಳಿಸಿ ಈ ದಾವೆ ದಾಖಲಿಸಿರುವ ವಿಷಯವು ಪ್ರತಿವಾದಿಗೆ ಗೊತ್ತಾಗಿರುವುದರಿಂದ, ಷೆಡ್ಯೂಲ್‌ನಲ್ಲಿರುವ ಆಸ್ತಿಗಳನ್ನು ಮಾರಾಟ ಮಾಡಲು ಪ್ರತಿವಾದಿಯು ಪ್ರಯತ್ನಿಸುತ್ತಿದ್ದಾರೆಂದು ವಾದಿ ಸಂಘವು ತನ್ನ ಪ್ರಮಾಣಪತ್ರದಲ್ಲಿ ವಿವರಿಸಲಾಗಿರುತ್ತದೆ. ಒಂದು ವೇಳೆ, ಕಲಂ 103 ರನ್ವಯ ಆದೇಶ ಪೂರ್ವ ಜಪ್ತಿ ಹೊರಡಿಸಿ, ಷೆಡ್ಯೂಲ್ ಆಸ್ತಿಗಳನ್ನು ಮಾರಾಟ, ಪರಭಾರೆ, ವರ್ಗಾವಣೆ ಮಾಡದಂತೆ ಪ್ರತಿವಾದಿಯನ್ನು ತಡೆಯದಿದ್ದಲ್ಲಿ, ಷೆಡ್ಯೂಲ್ ಆಸ್ತಿಗಳನ್ನು ಯಾವುದೇ ಕ್ಷಣದಲ್ಲಿ ಪ್ರತಿವಾದಿಯು ಮಾರಾಟ ಮಾಡುವ ಸಾಧ್ಯತೇ ಇದೇ ಎಂದು ವಾದಿ ಸಂಘ ವಿವರಿಸಿದೆ. ಒಂದು ವೇಳೆ, ಆಸ್ತಿಗಳನ್ನು ಮಾರಾಟ ಮಾಡಿದಲ್ಲಿ, ಈ ನ್ಯಾಯಾಲಯವು ಕಲಂ 70 ರನ್ವಯ ಸಲ್ಲಿಸಿರುವ ದಾವೆಯಲ್ಲಿ, ಕಲಂ 71 ರನ್ವಯ ನೀಡಬಹುದಾದ ದಾವಾದೇಶವನ್ನನುಸರಿಸಿ, ಪ್ರತಿವಾದಿಯಿಂದ ವಸೂಲಾತಿ ಮಾಡಬೇಕಾದ ಹಣವನ್ನು ವಸೂಲು ಮಾಡಿಕೊಳ್ಳಲು ಸಂಘಕ್ಕೆ ಬೇರೆ ಯಾವುದೇ ತರಹ ಇಲ್ಲವೆಂದು ವಾದಿ ಸಂಘದ ಪರ ವಕೀಲರು ವಿವರಿಸಿರುತ್ತಾರೆ.

ಸಂಘವು ತನ್ನ ದಾವಾ ಅರ್ಜಿಯಲ್ಲಿ ವಿವರಿಸಿರುವ ಅಂಶಗಳು ಮತ್ತು ಕಲಂ 103 ರನ್ವಯ ಪ್ರಮಾಣೀಕರಿಸಿ ಸಲ್ಲಿಸಿರುವ ಅರ್ಜಿ ಇವುಗಳನ್ನು ಈ ನ್ಯಾಯಾಲಯವು ಮೇಲ್ನೋಟಕ್ಕೆ ಕೂಲಂಕುಷವಾಗಿ ಪರಿಶೀಲಿಸಿದೆ.ವಾದಿ ಸಹಕಾರ ಸಂಘವು ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯನ್ನು ಪರಿಗಣಿಸಿ, ಆಸ್ತಿಗಳಿಗೆ ಸಂಬಂಧಿಸಿದಂತೆ, ಆದೇಶ ಪೂರ್ವ ಜಪ್ತಿ ನೋಟೀಸು ನೀಡದೇ ಇದ್ದಲ್ಲಿ, ಷೆಡ್ಯೂಲ್ ಆಸ್ತಿಗಳ್ನು ಪ್ರತಿವಾದಿಯು ಯಾವುದೇ ಕ್ಷಣದಲ್ಲಿ ಮಾರಾಟ ಮಾಡಬಹುದಾಗಿದೆ.ಈ ರೀತಿ ಮಾರಾಟ ಮಾಡಿದಲ್ಲಿ, ಈ ಪ್ರಕರಣದಲ್ಲಿ ಈ ನ್ಯಾಯಾಲಯವು ನೀಡಬಹುದಾದ ದಾವಾದೇಶದ ಮೊತ್ತವನ್ನು ವಸೂಲು ಮಾಡಿಕೊಳ್ಳುವುದು ವಾದಿ ಸಹಕಾರ ಸಂಘಕ್ಕೆ ಕಷ್ಟಸಾಧ್ಯವೆಂದು ನ್ಯಾಯಾಲಯವು ಮನಗಂಡಿದೆ.ಆದ್ದರಿಂದ, ದಿನಾಂಕ24-10-2016 ರಂದು ಈ ನ್ಯಾಯಾಲಯವು ಕಲಂ 103 (1) ರನ್ವಯ ಆದೇಶ ಪೂರ್ವಜಪ್ತಿ ನೋಟೀಸನ್ನು ಷೆಡ್ಯೂಲ್‌ನಲ್ಲಿ ವಿವರಿಸಿರುವ ಆಸ್ತಿಗಳಿಗೆ ನೀಡಲಾಗಿದೆ.ಆದೇಶ ಪೂರ್ವ ಜಪ್ತಿ ನೋಟೀಸಿನಲ್ಲಿ ವಿವರಿಸಿರುವ ಷರತ್ತುಗಳನ್ನು ಆದೇಶದ 30 ದಿನಗಳೊಳಗಾಗಿ ಪಾಲಿಸಲು ಪ್ರತಿವಾದಿಗೆ ಸೂಚಿಸಲಾಗಿದೆ.ದಿನಾಂಕ 29-11-2016 ರಂದು ನಡೆದ ವಿಚಾರಣಾ ಸಂದರ್ಭದಲ್ಲಿ ವಾದಿ ಪರ ವಕೀಲರು ಮೆಮೋ ಸಲ್ಲಿಸಿ, ಪ್ರತಿವಾದಿಯು ಆದೇಶ ಪೂರ್ವ ಜಪ್ತಿ ನೋಟೀಸಿನ ಷರತ್ತುಗಳನ್ನು ಪಾಲಿಸದೇ ಇರುವುದರಿಂದ, ಕಲಂ 103 (2) ರನ್ವಯ ದಿನಾಂಕ 24-10-2016 ರ ಆದೇಶವನ್ನು ಸ್ಥಿರೀಕರಣಗೊಳಿಸುವಂತೆ ಕೋರಿರುತ್ತಾರೆ.

ಪ್ರತಿವಾದಿಯು ವಾದಿಯು ಸಲ್ಲಿಸಿರುವ ಕಲಂ 103 ರ ಅರ್ಜಿಗೆ ಆಕ್ಷೇಪಣೆಗಳನ್ನು ಸಲ್ಲಿಸಿರುತ್ತಾರೆ.ಅಲ್ಲದೇ, ಪ್ರತಿವಾದಿಯು ಕಲಂ 71 (3) ರನ್ವಯ ಮಧ್ಯಂತರ ಅರ್ಜಿ ಸಲ್ಲಿಸಿ, ದಾವಾ ಅರ್ಜಿಯ ಊರ್ಜಿತತೆಯ ಬಗ್ಗೆ ವಿಚಾರಣೆ ನಡೆಸಿ, ದಾವಾ ಅರ್ಜಿಯನ್ನು ವಜಾಗೊಳಿಸಬೇಕೆಂದು ನ್ಯಾಯಾಲಯವನ್ನು ಕೋರಿರುತ್ತಾರೆ. ಕಲಂ 103 ರ ಅರ್ಜಿಗೆ ಪ್ರತಿವಾದಿಯು ಸಲ್ಲಿಸಿರುವ, ಆಕ್ಷೇಪಣೆಗಳಿಗೆ ಪ್ರತ್ಯುತ್ತರ ಸಲ್ಲಿಸಲು ಮತ್ತು ಪ್ರತಿವಾದಿಯು ಕಲಂ 71 (3) ರನ್ವಯ ಸಲ್ಲಿಸಿರುವ ದಾವಾ ಅರ್ಜಿಯ ಊರ್ಜಿತತೆಯ ಬಗ್ಗೆ ಆಕ್ಷೇಪಣೆ ಸಲ್ಲಿಸಲು ವಾದಿ ಸಂಘಕ್ಕೆ ಅವಕಾಶ ಕಲ್ಪಿಸಿ ಪ್ರಕರಣದ ವಿಚಾರಣೆಯನ್ನು ಮುಂದೂಡಲಾಯಿತು

ದಿನಾಂಕ 29-11-2016 ಕ್ಕೆ ವಿಚಾರಣೆಗೆ ನಿಗದಿಗೊಳಿಸಿದ್ದ ಪ್ರಕರಣವನ್ನು ಪೂರ್ವಭಾವಿಯಾಗಿ ದಿನಾಂಕ 12-12-2016 ರಂದು ಕೇಳಲು ವಾದಿ ಸಹಕಾರ ಸಂಘವು ಮಧ್ಯಂತರ ಅರ್ಜಿ ಸಲ್ಲಿಸಿದೆ. ಇದರನ್ವಯ ಪ್ರಕರಣದ ವಿಚಾರಣೆಯನ್ನು ದಿನಾಂಕ:12-12-2016 ರಂದು ನಡೆಸಲಾಗಿದೆ. ದಿನಾಂಕ 12-12-2016 ರಂದು ನಡೆದ ವಿಚಾರಣೆಯಲ್ಲಿ ಪ್ರತಿವಾದಿಯು ಕಲಂ 103 ರನ್ವಯ ಸಲ್ಲಿಸಿದ ಆಕ್ಷೇಪಣೆಗಳಿಗೆ ವಾದಿ ಸಂಘವು ಪ್ರತ್ಯುತ್ತರ ಸಲ್ಲಿಸಿದೆ. ಅಲ್ಲದೇ ಪ್ರತಿವಾದಿಯು ಕಲಂ 71 (3) ರನ್ವಯ ದಾವಾ ಅರ್ಜಿಯ ಊರ್ಜಿತತೆ ಪ್ರಶ್ನಿಸಿ ಸಲ್ಲಿಸಿದ್ದ ಮಧ್ಯಂತರ ಅರ್ಜಿಗೆ ವಾದಿ ಸಂಘವು ಆಕ್ಷೇಪಣೆಗಳನ್ನು ಸಲ್ಲಿಸಿದೆ. ಈ ವಿಚಾರಣಾ ಸಂದರ್ಭದಲ್ಲಿ, ವಾದಿ ಸಂಘವು ಕಲಂ 71 (3) ರನ್ವಯ ಮಧ್ಯಂತರ ಅರ್ಜಿ ಸಲ್ಲಿಸಿ, ಪ್ರತಿವಾದಿಯು ಸಂಘದ ಅಭಿವೃದ್ಧಿಗೆ ಅಡ್ಡಿ ಬಾರದಂತೆ, ಸದಸ್ಯರಿಗೆ ಪ್ರಚೋದನೆ ನೀಡದಂತೆ ಮತ್ತು ನಾಮಿನೇಷನ್ ಅಗ್ರಿಮೆಂಟ್ ಕರಾರುಗಳನ್ವಯ ಭೂಮಾಲೀಕರೊಂದಿಗೆ ಕರಾರು ಮುಂತಾದ ವ್ಯವಹಾರಗಳನ್ನು ಸಂಘ ಮಾಡಿಕೊಳ್ಳುವುದಕ್ಕೆ ಅಡ್ಡಿ ಆತಂಕ ಉಂಟು ಮಾಡದಂತೆ, ಪ್ರತಿವಾದಿಗೆ ನಿರ್ಬಂಧಿಸಿ ತಡೆಯಾಜ್ಞೆ ನೀಡಬೇಕೆಂದು ಕೋರಿದೆ. ಈ ಅರ್ಜಿಗೆ

ಪ್ರತಿವಾದಿಯು ಆಕ್ಷೇಪಣೆ ಸಲ್ಲಿಸಲು ಅವಕಾಶ ಕೋರಿದ್ದಾರೆ.ಈ ಮೇಲಿನ 3 ಅರ್ಜಿಗಳ ಬಗ್ಗೆ ವಿಚಾರಣೆ ನಡೆಸಲು ದಿನಾಂಕ 15-12-2016 ಕ್ಕೆ ಪ್ರಕರಣವನ್ನು ಮುಂದೂಡಲಾಗಿದೆ.

ವಿಚಾರಣೆ ಮುಂದುವರೆದು ಕಲಂ 103 ರ ಅರ್ಜಿಗೆ ಸಂಬಂಧಿಸಿದಂತೆ, ಪ್ರತಿವಾದಿಯು ಸಲ್ಲಿಸಿರುವ ಆಕ್ಷೇಪಣೆಗಳು ಇವುಗಳನ್ನು ಈ ಕೆಳಗಿನಂತೆ ಪರಿಶೀಲಿಸಲಾಗಿದೆ.ಪ್ರತಿವಾದಿಯು ಕಲಂ 71 (3) ರನ್ವಯ ದಾವಾ ಅರ್ಜಿಯ ಊರ್ಜಿತತೆಯ ಬಗ್ಗೆ ಸಲ್ಲಿಸಿರುವ ಅರ್ಜಿ ಮತ್ತು ವಾದಿ ಸಹಕಾರ ಸಂಘವು ಸಲ್ಲಿಸಿರುವ ಆಕ್ಷೇಪಣೆಗಳು ಇವುಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಲಾಗುವುದು.

ಪ್ರತಿವಾದಿಯು ಕಲಂ 103 ರ ಅರ್ಜಿಗೆ ಸಲ್ಲಿಸಿರುವ ಆಕ್ಷೇಪಣೆಗಳಲ್ಲಿ ವಿವರಿಸಿರುವ ಅಂಶಗಳೆಂದರೆ, ವಾದಿ ಸಂಘವು ತನ್ನ ದಾವಾ ಅರ್ಜಿಯಲ್ಲಿ ವಿವರಿಸಿರುವ ಕ್ಲೇಮನ್ನು ವಸೂಲುಮಾಡಿಕೊಳ್ಳಲು ಕಲಂ 64 ರ ವಿಚಾರಣಾ ವರದಿ ಅಥವಾ ಕಲಂ 65 ರ ಪರಿವೀಕ್ಷಣಾ ವರದಿಯನ್ನು ಸಲ್ಲಿಸಿರುವುದಿಲ್ಲ. ದಿನಾಂಕ 20-09-2016 ರಂದು ಯೋಜನೆಯಿಂದ ಹಿಂದೆ ಸರಿಯುವಂತೆ ತನ್ನಿಂದ, ವಾದಿ ಸಹಕಾರ ಸಂಘದ ಕೆಲ ಪದಾಧಿಕಾರಿಗಳು ಮತ್ತು ನಿರ್ದೇಶಕರುಗಳು ಒತ್ತಾಯಪೂರ್ವಕವಾಗಿ ಬರೆಸಿಕೊಂಡಿದ್ದಾರೆಂದು ವಿವರಿಸಿದ್ದಾರೆ. ದಿನಾಂಕ 20-09-2016 ರಂದು ತಾವು ನೀಡಿದ ಪತ್ರವನ್ನು ಒಪ್ಪಿಕೊಂಡು ದಿನಾಂಕ 27-09-2016 ರಂದು ನಡೆದ ಆಡಳಿತ ಮಂಡಳಿಯ ನಿಯಮಾನುಸಾರ ನಡೆದಿರುವುದಿಲ್ಲ ಎಂದು ವಿವರಿಸಲಾಗಿದೆ. ರೂ.3,00,00,000-00 ಗಳನ್ನು ಪ್ರತಿವಾದಿಯ ಪತ್ನಿಯು ಮನೆ ಕಟ್ಟಿಸಲು ಮೆಃ ಕೋಸ್ಟಲ್ ಪ್ರಾಜೆಕ್ಟ್ಸ್ ಲಿಮಿಟೆಡ್ ಇವರಿಂದ ಪಡೆದಿರುವುದಾಗಿ, ಕಾರನ್ನು ಖರೀದಿಸಲು ದಿನಾಂಕ 30-09-2013 ರಂದು ಟೊಯೋಟಾ ಫೈನಾನ್ಸ್ ಕಂಪನಿಯಿಂದ ಸಾಲ ಪಡೆಯಲಾಗಿದೆ ಎಂದು ಮತ್ತು ಮಗಳಾದ ಡಾಃ ಶಾಲಿನಿ ಇವರು ರೂ.9,90,000-00 ಗಳ ಸಾಲವನ್ನು ವಿನಾಯಕ ಕಾರ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯಿಂದ ಖರೀದಿಸಲು ಸಿಂಡಿಕೇಟ್ ಬ್ಯಾಂಕಿನಿಂದ ಸಾಲ ಪಡೆಲಿದ್ದಾರಂದು ವಿವರಿಸಿ, ಕಲಂ 103 ರನ್ವಯ ವಾದಿ ಸಹಕಾರ ಸಂಘವು ಸಲ್ಲಿಸಿರುವ ಅರ್ಜಿಯನ್ನು ತಿರಸ್ಕರಿಸಿ, ದಿನಾಂಕ 24-10-2016 ರಂದು ಈ ನ್ಯಾಯಾಲಯವು ಹೊರಡಿಸಿರುವ ಆದೇಶ ಪೂರ್ವ ಜಪ್ತಿ ನೋಟೀಸನ್ನು ವಾಪಸ್ಸು ಪಡೆಯಲು ಕೋರಿದ್ದಾರೆ.

ಪ್ರತಿವಾದಿಯು ಕಲಂ 103 ರನ್ವಯ ಸಲ್ಲಿಸಿರುವ ಆಕ್ಷೇಪಣೆಗಳಿಗೆ, ವಾದಿ ಸಹಕಾರ ಸಂಘವು ಸಲ್ಲಿಸಿರುವ ಪ್ರತ್ಯುತ್ತರದಲ್ಲಿ, ಪ್ರತಿವಾದಿಯೇ ತನ್ನ ಪತ್ರ ದಿನಾಂಕ 21-03-2016 ರಲ್ಲಿ ಒಪ್ಪಿಕೊಂಡಿರುವಂತೆ ರೂ.31,52,00,000-00 ಗಳನ್ನು ಪಡೆದಿದ್ದಾರೆ ಮತ್ತು ನಂತರ ರೂ.86,00,000-00ಗಳನ್ನು ಪಡೆದಿದ್ದಾರೆ. ಹೀಗೆ ಒಟ್ಟು ರೂ.32,38,00,000-00 ಗಳನ್ನು ಸಂಘದಿಂದ ಪಡೆದಿರುವುದಾಗಿದೆ. ಲೀ ಮೊತ್ತಕ್ಕೆ ಕೇವಲ ರೂ.12,19,13,000-00 ಗಳಿಗೆ ಮಾತ್ರ ಭೂಮಾಲೀಕರಿಗೆ ನೀಡಿರುವುದಾಗಿ ಪ್ರತಿವಾದಿಯು ವಿವರಿಸಿದ್ದಾರೆ. ಆದರೆ ಸಂಘವು ಒಪ್ಪುವ ನೈಜ ದಾಖಲಾತಿಗಳನ್ನು ಒದಗಿಸುವ ಹೊಣೆಗಾರಿಕೆ ಪ್ರತಿವಾದಿಗೆ ಇರುತ್ತದೆ. ದಿನಾಂಕ 15-03-2013 ರ ಕರಾರಿನಂತೆ 65 ಎಕರೆ ಭೂಮಿಯನ್ನು ಖರೀದಿಸಿ, ವಸತಿ ನಿರ್ಮಾಣ ಮಾಡಲು ಅನುವಾಗುವಂತೆ ಸಂಬಂಧಿಸಿದ ಪ್ರಾಧಿಕಾರಗಳಿಂದ, 2 ಎಕರೆ ಭೂಮಿಗೆ ಹೊರತುಪಡಿಸಿ, ಮಿಕ್ಕುಳಿದ ಭೂಮಿಗೆ ಅನುಮತಿ ಪಡೆದು ನೀಡಿರುವುದಿಲ್ಲ. ಬಡಾವಣೆ ನಿರ್ಮಾಣದ ಬಗ್ಗೆ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಸಂಘದಿಂದ ಪಡೆದ ಹಣಕ್ಕೆ ದಿನಾಂಕ 15-03-2013 ರ ಕರಾರಿನನ್ವಯ ಬ್ಯಾಂಕಿನಿಂದ ಭದ್ರತೆ ಒದಗಿಸಿರುವುದಿಲ್ಲ; ಒಪ್ಪಂದದನ್ವಯ 21 ತಿಂಗಳಿಗೂ ಹೆಚ್ಚು ಕಾಲಾವಕಾಶ ತೆಗೆದುಕೊಂಡಿದ್ದರೂ ಕೂಡಾ, ನಿವೇಶನಗಳನ್ನು ಸದಸ್ಯರಿಗೆ ಹಂಚಿಕೆ ಮಾಡಲು ಅನುಕೂಲವಾಗುವಂತೆ ಬಡಾವಣೆ ರಚಿಸಿ ಸಂಘಕ್ಕೆ ನೀಡಿರುವುದಿಲ್ಲ. ಹೀಗಿದ್ದರೂ ಕೂಡಾ ದಿನಾಂಕ 20-09-2016 ರ ಸ್ವಯಂ ಪ್ರೇರಿತ ಪತ್ರದನ್ವಯ ಸ್ವಇಚ್ಛೆಯಿಂದ ಯೋಜನೆಯನ್ನು ಪ್ರತಿವಾದಿಯು ಕೈಬಿಟ್ಟಿದ್ದಾರೆ. ಅಲ್ಲದೇ ಯಾವುದೇ ಉದ್ದೇಶಕ್ಕಾಗಿ, ಯಾವುದೇ ಕಾರಣಕ್ಕಾಗಲೀ, ಯಾವುದೇ ಹಂತದಲ್ಲಾಗಲೀ ಯೋಜನೆಯನ್ನು ಮುಂದುವರೆಸಲಾಗುವುದಿಲ್ಲವೆಂದು ಬರೆದುಕೊಟ್ಟಿರುತ್ತಾರೆ.ಈ ಹಿನ್ನೆಲೆಯಲ್ಲಿ ದಿನಾಂಕ 15-03-2013 ರ ಒಪ್ಪಂದ, ಒಪ್ಪಂದದ ಕರಾರುಗಳನ್ವಯ ನಡೆದುಕೊಳ್ಳಲು ಪ್ರತಿವಾದಿಯು ವಿಫಲರಾಗಿದ್ದಾರೆ.ಈ ಹಿನ್ನೆಲೆಯಲ್ಲಿ, ಸಂಘವು ಕಲಂ 70 ರನ್ವಯ ದಾವೆಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿದೆ.ಕಲಂ 103 ರನ್ವಯ ಸಂಘವು ಸಲ್ಲಿಸಿದ ಅರ್ಜಿಯನ್ನು ಈ ನ್ಯಾಯಾಲಯವು ಪುರಸ್ಕರಿಸಿ, ದಿನಾಂಕ 24-10-2016 ರಂದು ಕಲಂ 103 (1)ರನ್ವಯ ಆದೇಶ ಪೂರ್ವ ಜಪ್ತಿ ನೋಟೀಸನ್ನು ಸದರಿ ನೋಟೀಸಿನಲ್ಲಿ ವಿವರಿಸಿರುವ ಆಸ್ತಿಗಳಿಗೆ ಹೊರಡಿಸಿದೆ.ಇದರಲ್ಲಿ ಯಾವುದೇ ಲೋಪವಾಗಿರುವುದಿಲ್ಲ. ಯೋಜನೆಯಿಂದ ಸ್ವಯಂ ಪ್ರೇರಿತವಾಗಿ ದಿನಾಂಕ 20-09-2016 ರ ಪತ್ರದ ಮೂಲಕ ಪ್ರತಿವಾದಿಯು ಹೊರಗುಳಿದಿದ್ದಾರೆ. ಕಲಂ 70 ರನ್ವಯ ದಾವ ಸಲ್ಲಿಸಲು ಕಲಂ 64 ರ ವಿಚಾರಣಾ ವರದಿ ಅಥವಾ ಕಲಂ 65 ರ ಪರಿವೀಕ್ಷಣಾ ವರದಿಯ ಅವಶ್ಯಕತೆ ಇರುವುದಿಲ್ಲ. ರೂ.3,00,00,000-00 ಗಳ ಸಾಲವನ್ನು ಗೃಹ ನಿರ್ಮಾಣಕ್ಕಾಗಿ ಪ್ರತಿವಾದಿಯ ಪತ್ನಿಯವರು ಕೋಸ್ಟಲ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್, ಇವರಿಂದ ಪಡೆದಿರುವುದಿಲ್ಲ. ಬದಲಾಗಿ ಸದರಿ ಕಂಪನಿಗೆ, ಆಸ್ತಿಯನ್ನು ನೀಡಲಾಗಿದೆ ಎಂದು ವಿವರಿಸಲಾಗಿದೆ. ಅಲ್ಲದೇ ಪ್ರತಿವಾದಿಯ ಪತ್ನಿಯು ಮನೆ ಕಟ್ಟಿಸಲು ಸ್ವಂತ ಬಂಡವಾಳವನ್ನು ತೊಡಗಿಸಿದ್ದಾರೆಂಬ ಬಗ್ಗೆ; ಪ್ರತಿವಾದಿಯ ಮಗಳು ರೂ.9,90,000-00 ಗಳಲ್ಲಿ ಕಾರನ್ನು ಖರೀದಿಸಲು ಸ್ವಂತ ಬಂಡವಾಳ ತೊಡಗಿಸಿದ್ದಾರೆಂಬ ಬಗ್ಗೆ ಪ್ರತ್ಯೇಕ ದಾಖಲಾತಿಗಳನ್ನು ಹಾಜರಪಡಿಸಿ ಸಾಬೀತುಪಡಿಸಬೇಕಾಗಿದೆ ಆದ್ದರಿಂದ ಪ್ರತಿವಾದಿಯು ಸಲ್ಲಿಸಿರುವ ಆಕ್ಷೇಪಣೆಗಳನ್ನು ತಿರಸ್ಕರಿಸಿ, ಈ ನ್ಯಾಯಾಲಯವು ದಿನಾಂಕ 24-10-2016 ರಂದು ಹೊರಡಿಸಿರುವ ಆದೇಶ ಪೂರ್ವ ಜಪ್ತಿ ನೋಟೀಸಿನಲ್ಲಿ ವಿವರಿಸಿರುವ ಆಸ್ತಿಗಳಿಗೆ ಕಲಂ 103 (2) ರನ್ವಯ ಸ್ಥಿರೀಕರಿಸಿ ಆದೇಶ ನೀಡಬೇಕಾಗಿ ಕೋರಿದ್ದಾರೆ.

ಮೇಲಿನ ಅಂಶದ ಬಗ್ಗೆ ವಾದಿ ಮತ್ತು ಪ್ರತಿವಾದಿಗಳ ವಕೀಲರ ವಾದವನ್ನು ನ್ಯಾಯಾಲಯವು ಆಲಿಸಿದೆ. ವಾದಿ ಸಹಕಾರ ಸಂಘವು ಈ ಮೇಲೆ ವಿವರಿಸಿದಂತೆ, ಕಲಂ 70 (ಎ)(ಇ) ರನ್ವಯ ದಾವೆ ಸಲ್ಲಿಸಿ, ಪ್ರತಿವಾದಿಯಿಂದ ರೂ.17,57,87,000-00 ಗಳನ್ನು ಶೇಕಡ 18 ರ ಬಡ್ಡಿಯೊಂದಿಗೆ ವಸೂಲು ಮಾಡಿಕೊಳ್ಳಲು ಕೋರಿದೆ. ಕಲಂ 103 ರನ್ವಯ ಸಲ್ಲಿಸಿದ್ದ ಪ್ರಮಾಣೀಕೃತ ಅರ್ಜಿಯನ್ನು ಈ ನ್ಯಾಯಾಲಯವು ಕೂಲಂಕುಷವಾಗಿ ಪರಿಶೀಲಿಸಿ ದಿನಾಂಕ 24-10-2016 ರಂದು ಆದೇಶ ಪೂರ್ವ ಜಪ್ತಿ ನೋಟೀಸನ್ನು ಹೊರಡಿಸಿದೆ.ನೋಟೀಸಿನಲ್ಲಿ ವಿಧಿಸಿರುವ ಷರತ್ತುಗಳನ್ನು ಪ್ರತಿವಾದಿಯು ಪೂರೈಕೆ ಮಾಡಿಲ್ಲವೆಂದು ಮತ್ತು ಈ ಕಾರಣದಿಂದ ಕಲಂ 103 (2) ರನ್ವಯ ಆದೇಶವನ್ನು ಸ್ಥಿರೀಕರಿಸಬೇಕೆಂದು ವಾದಿ ಸಹಕಾರ ಸಂಘವು ದಿನಾಂಕ 29-11-2016 ರಂದೇ ಮೆಮೋ ಸಲ್ಲಿಸಿದೆ.ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಗೆ ಈಗಾಗಲೇ ಪರಿಶೀಲಿಸಿ ಗಮನಿಸಿದಂತೆ, ಪ್ರತಿವಾದಿಯು ಆಕ್ಷೇಪಣೆಗಳನ್ನು ಸಲ್ಲಿಸಿದ್ದಾರೆ. ಕಲಂ 70 (2) (ಇ) ರನ್ವಯ ವಾದಿ ಸಹಕಾರ ಸಂಘವು ಮಾಡಿರುವ ಕ್ಲೇಮಿಗೆ ಪೂರಕವಾಗಿ ಕಲಂ 64 ರ ವಿಚಾರಣಾ ವರದಿ ಅಥವಾ ಪರಿವೀಕ್ಷಣೆಯ ಅವಶ್ಯಕತೆ ಇರುವುದಿಲ್ಲ. 65 ಎಕರೆ ಭೂಮಿಯನ್ನು ಸಂಬಂಧಿಸಿದ ಪ್ರಾಧಿಕಾರಗಳ ಅನುಮತಿ ಪಡೆದು ಕೃಷಿಯೇತರ ಭೂಮಿಯನ್ನಾಗಿ ಪರಿವರ್ತಿಸಿ, ಬಡಾವಣೆ ರಚಿಸಿ, ವಾದಿ ಸಹಕಾರ ಸಂಘದ ಸದಸ್ಯರುಗಳಿಗೆ ಅನುಕೂಲವಾಗುವಂತೆ ವಿವಿಧ ಅಳತೆಯ ನಿವೇಶನಗಳನ್ನು ವಿಂಗಡಿಸಿ, ನೀಡಲು ಅನುವಾಗುವಂತೆ ದಿನಾಂಕ 15-03-2013 ರಂದು ಮಾಡಿಕೊಂಡ ಕರಾರಿನನ್ವಯ ಪ್ರತಿವಾದಿಯು ಕ್ರಮವಿಟ್ಟಿಲ್ಲವೆಂದು ವಿವರಿಸಲಾಗಿದೆ. ವಾದಿ ಸಹಕಾರ ಸಂಘದಿಂದ ಪಡೆದ ಹಣಕ್ಕೆ, ಪ್ರತಿವಾದಿಯು ಬ್ಯಾಂಕಿನ ಭದ್ರತೆಯನ್ನು ಒದಗಿಸಿಲ್ಲವೆಂದು ವಿವರಿಸಲಾಗಿದೆ. ದಿನಾಂಕ:15-03-2013 ರ ಕರಾರುಗಳನ್ನು ಕಾರ್ಯರೂಪಕ್ಕೆ ತರದೇ ದಿನಾಂಕ:20-9-2016 ರಂದು ಸ್ವಯಂ ಪ್ರೇರಿತರಾಗಿ ಪತ್ರ ನೀಡುವ ಮೂಲಕ, ಪ್ರತಿವಾದಿಯು ಯೋಜನೆಯಿಂದ ಹೊರಗುಳಿಯಲ್ಪಟ್ಟಿದ್ದಾರೆ ಎಂದು

ವಿವರಿಸಲಾಗಿದೆ. ದಿನಾಂಕ 20-09-2016 ರ ಪತ್ರವನ್ನು ನೀಡಿರುವುದಾಗಿ ಪ್ರತಿವಾದಿಯು ಒಪ್ಪಿಕೊಂಡಿದ್ದಾರೆ.ಆದರೆ ಸದರಿ ಪತ್ರವನ್ನು ಸಂಘದ ಕೆಲ ಪದಾಧಿಕಾರಿಗಳು ಮತ್ತು ನಿರ್ದೇಶಕರುಗಳು ಒತ್ತಾಯಪೂರ್ವಕವಾಗಿ ಪಡೆದಿದ್ದಾರೆಂದು ವಿವರಿಸಿದ್ದಾರೆ. ಈ ಹಂತದಲ್ಲಿ ಪ್ರತಿವಾದಿಯ ಈ ಮೇಲಿನ ಹೇಳಿಕೆಗಳನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ದಿನಾಂಕ:15-03-2013 ರ ಕರಾರಿನಲ್ಲಿ, ಸಂಘದಿಂದ ಪಡೆಯುವ ಹಣಕ್ಕೆ, ಪ್ರತಿವಾದಿಯು ಬ್ಯಾಂಕ್ ಭದ್ರತೆಯನ್ನು ಒದಗಿಸಲು ಒಪ್ಪಿಕೊಂಡಿದ್ದಾರೆ. ಇದರಂತೆ, ಪ್ರತಿವಾದಿಯು ನಡೆದುಕೊಂಡಿರುವುದಿಲ್ಲ. ಈಗಾಗಲೇ ಗಮನಿಸಿದಂತೆ ರೂ.17,57,87,000/- ಗಳನ್ನು ಶೇಕಡ 18ರ ಬಡ್ಡಿಯೊಂದಿಗೆ ಪ್ರತಿವಾದಿಯಿಂದ ವಸೂಲು ಮಾಡಿಕೊಳ್ಳಲು ಅನುವಾಗುವಂತೆ ದಾವಾದೇಶ ಕೋರಿ ದಾವೆ ಸಲ್ಲಿಸಿದೆ. ಇದು ಬೃಹತ್ ಮೊತ್ತದ ಕ್ಲೇಂ ಆಗಿರುತ್ತದೆ.ವಾದಿ ಸಹಕಾರ ಸಂಘದ ಪರ ವಕೀಲರು ಕಲಂ 103 (2) ರ ಬಗ್ಗೆ ವಿಶ್ಲೇಷಿಸುತ್ತಾ, ಕಲಂ 103 (1) ರನ್ವಯ ನೀಡಿದ ನೋಟೀಸಿನಲ್ಲಿ ವಿಧಿಸಿರುವ ಷರತ್ತುಗಳನ್ನು ನಿಗದಿತ ಅವಧಿಯಲ್ಲಿ ಭದ್ರತೆ ನೀಡಲು ಪ್ರತಿವಾದಿಯು ವಿಫಲರಾಗಿರುವುದರಿಂದ, ಆದೇಶವನ್ನು ಸ್ಥಿರೀಕರಿಸುವುದು ಅನಿವಾರ್ಯವೆಂದು ವಿವರಿಸಿದ್ದಾರೆ.ಕಲಂ 103 (2) ನ್ನು ಪರಿಶೀಲಿಸಲಾಗಿ, ಮೇಲಿನ ವಾದ ಸರಿಯಾಗಿರುತ್ತದೆ. ವಾದಿ ಸಂಘವು ಸಲ್ಲಿಸಿರುವ ದಾವಾ ಅರ್ಜಿಗೆ ಸಂಬಂಧಿಸಿದಂತೆ, ಈ ನ್ಯಾಯಾಲಯವು 71 ರನ್ವಯ ನೀಡಬಹುದಾದ ಆದೇಶದ ಮೊತ್ತವನ್ನು ವಸೂಲು ಮಾಡಿಕೊಳ್ಳುವುದು ವಾದಿ ಸಹಕಾರ ಸಂಘಕ್ಕೆ ಕಷ್ಟಸಾಧ್ಯವೆಂಬ ಅಂಶವನ್ನು ಮನಗಂಡು ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

## ಸ್ಥಿರೀಕರಣ ಆದೇಶ

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 70 ಮತ್ತು 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ:ಸಿಒ/71 /ಸಿಎಲ್ಎಂ/2016 ದಿನಾಂಕ:06-12-2016 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ.ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಆದ ನಾನು ಈ ಪ್ರಕರಣದ ಮತ್ತು ಆಸ್ತಿಗಳನ್ನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103(1) ರನ್ವಯ ದಿನಾಂಕ:24-10-2016 ರಂದು ಹೊರಡಿಸಿರುವ ಆದೇಶವನ್ನು 103 (2) ರನ್ವಯ ಜಪ್ತಿ ಪೂರ್ವ ಆದೇಶವನ್ನು ಸ್ಥಿರೀಕರಿಸಿರುತ್ತೇನೆ.

## ಷೆಡ್ಯೂಲ್ ಸ್ವತ್ತಿನ ವಿವರಗಳು

**1. ಷೆಡ್ಯುಲ್**

ಹಾಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಶೆಟ್ಟಿಹಳ್ಳಿ-12ನೇ ವಿಭಾಗದ ವ್ಯಾಪ್ತಿಗೆ ಒಳಪಟ್ಟ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಅಬ್ಬಿಗೆರೆ ಗ್ರಾಮದ ಮಾಜಿ 23/2, ಹಾಲಿ 23/3ನೇ ಸಂಖ್ಯೆಯಾಗಿ ಅಸೆಸ್‌ಮೆಂಟಾಗಿರುವ ಸ್ವತ್ತಿನ 2(ಎರಡು)ನೇ ನಂಬರಿನ ಖಾಲಿ ನಿವೇಶನಕ್ಕೆ ಚಕ್ಕುಬಂದಿ :

| | | |
|---|---|---|
| ಪೂರ್ವಕ್ಕೆ | : | 1ನೇ ಸಂಖ್ಯೆಯ ನಿವೇಶನ |
| ಪಶ್ಚಿಮಕ್ಕೆ | : | ಬೇರೆಯವರ ಸ್ವತ್ತು |
| ಉತ್ತರಕ್ಕೆ | : | ಪುಟ್ಟಲಕ್ಷ್ಮಯ್ಯ ರವರ ಸ್ವತ್ತು |
| ದಕ್ಷಿಣಕ್ಕೆ | : | ರಸ್ತೆ |

ಈ ಮಧ್ಯೆ ಇರುವ ಪೂರ್ವ-ಪಶ್ಚಿಮ : 70-00 (ಎಪ್ಪತ್ತು) ಅಡಿಗಳು, ಉತ್ತರ-ದಕ್ಷಿಣ : ಪೂರ್ವದ ಕಡೆ 46.75 (ನಲವತ್ತಾರು ಮುಕ್ಕಾಲು) ಅಡಿಗಳು, ಪಶ್ಚಿಮದ ಕಡೆ 45.75 (ನಲವತ್ತೈದು ಮುಕ್ಕಾಲು) ಅಡಿಗಳು, 3237.5 ಚದರ ಅಡಿಗಳ ಅಳತೆಯ ನಿವೇಶನ ಈ ಕ್ರಯ ಪತ್ರಕ್ಕೆ ಒಳಪಟ್ಟಿರುತ್ತದೆ. ಅನುಸೂಚಿ ನಿವೇಶನವನ್ನು ಈಗಿನ ಸರ್ಕಾರಿ ಮಾರುಕಟ್ಟೆ ಬೆಲೆ ರೂ.45,50,000/- (ನಲವತ್ತೈದು ಲಕ್ಷದ ಐವತ್ತು ಸಾವಿರ) ಗಳಿಗೆ ಕ್ರಯ ಮಾಡಿದ್ದು, ಇದಕ್ಕೆ ಅನುಸಾರವಾಗಿ ಮುದ್ರಾಂಕ ಮತ್ತು ನೋಂದಣಿ ಶುಲ್ಕ ಪಾವತಿ ಮಾಡಿರುತ್ತೆ.

**2. Schedule Property**

All that part and parcel of the property bearing site no.28, having Bengaluru Zilla Panchayath Abbigere Grama Panchayath Khatha No.909/578/28 (Old Khatha No.578), presently bearing BBMP Khatha No.909, a Triangular site, measuring East to West 0 feet on the Northern side and 37 feet on the Southern side and North to South 65 feet on the Easter side and 76 feet on the Western side, in all measuring (37'+0')/2x(76'+65')/2 =1,304.25 Sq. Ft. Situated in the layout formed in the converted land bearing Sy.No.29/2 vide Conversion Order bearing Official Memorandum No.B.Dis.ALN.SR. (N) 61/2003-04 dated 18/08/2003, issued by the Special Deputy Commissioner, Bengaluru District and Conversion Sanction Certificate No. ALN.SR(N)/69/2003-04, dated 20/07/2003, issued by the Tahasildar, dated 20/07/2003 situated at ABBIGERE VILLAGE, Yeshwanthpur Hobli, Bengaluru North Taluk, Bengaluru and presently within the limits of Bruhath Bengaluru Mahanagara Palike, bounded on the :

| | |
|---|---|
| East by : | Site No.27 |
| West by : | Road |
| North by : | Private Property |
| South by : | Road |

**3. Schedule Property**

All that part and parcel of the property bearing **site no.25**, having Bengaluru Zilla Panchayath Abbigere Grama Panchayath **Khatha No.906/578/25 (Old Khatha No.578)**, presently bearing **BBMP Khatha No.906**, measuring**East to West 40 feet and North to South 65 feet** in all measuring 2,600 Sq. Ft. Situated in the layout formed in the converted land bearing Sy.No.29/2 vide Conversion Order bearing Official Memorandum No.B.Dis.ALN.SR. (N) 61/2003-04 dated 18/08/2003, issued by the Special Deputy Commissioner, Bengaluru District and Conversion Sanction Certificate No. ALN.SR(N)/69/2003-04, dated 20/07/2003, issued by the Tahasildar, dated 20/07/2003 situated at **ABBIGERE VILLAGE**, Yeshwanthpur Hobli, Bengaluru North Taluk, Bengaluru and presently within the limits of Bruhath Bengaluru Mahanagara Palike, bounded on the :

East by : Private Property
West by : Site No.26
North by : Private Property
South by : Road

**4. Schedule Property**

All that part and parcel of the property bearing **site no.27**, having Bengaluru Zilla Panchayath Abbigere Grama Panchayath **Khatha No.906/578/27 (Old Khatha No.578)**, presently bearing **BBMP Khatha No.906**, measuring**East to West 39 feet and North to South 65 feet** in all measuring 2,535 Sq. Ft. Situated in the layout formed in the converted land bearing Sy.No.29/2 vide Conversion Order bearing Official Memorandum No.B.Dis.ALN.SR. (N) 61/2003-04 dated 18/08/2003, issued by the Special Deputy Commissioner, Bengaluru District and Conversion Sanction Certificate No. ALN.SR(N)/69/2003-04, dated 20/07/2003, issued by the Tahasildar, dated 20/07/2003 situated at **ABBIGERE VILLAGE**, Yeshwanthpur Hobli, Bengaluru North Taluk, Bengaluru and presently within the limits of Bruhath Bengaluru Mahanagara Palike, bounded on the :

East by : Site No.26
West by : Site No.28
North by : Private Property
South by : Road

**5. Schedule Property**

Property bearing **site no.46**, 16th Cross, 4th Main Road, Ward No.46, Malleshwaram, Bengaluru -30, PID No.7-3-46, measuring :3220.07 Sq. Feet together with building under construction.

East by : Site No.45
West by : Site No.47
North by : Road
South by : Private Property

**6. Schedule property**

Sy.No.22, Abbigere Village, Yeshwanthpur Hobli, Bengaluru North, measuring 1 Acre together with school building.

East by : Talavara Land
West by : Chowdappa's land
North by : Era Dasappa's land
South by : Road

**7. Schedule property**

Sy.No.24/2, Abbigere Village, Yeshwanthpur Hobli Bengaluru North, measuring 6. 4/3 gunta together with building.

East by : Private property
West by : Private property
North by : Puttalakshmaiah's property
South by : Road

**8. ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.40/1 ರಲ್ಲಿ 0.34 ಎಕರೆ ಖಾತಾ ಸಂಖ್ಯೆ 177

East by : N.K.Ramakrishna's property
West by : Gangaiah & Kalegowda's property
North by : N.N.Nagappa's property
South by : G.Krishnamurthy's Property

9. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.40/2 ರಲ್ಲಿ 0.32 ಎಕರೆ ಖಾತಾ ಸಂಖ್ಯೆ 177

East by : Sannananjaiah's property & Kodihalla
West by : Nagamma, Siddagangaiah & Kalegowda's property
North by : N.N.Nagappa's property
South by : G.Krishnamurthy's Property

10. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.46/29 ರಲ್ಲಿ 0.06 ಎಕರೆ ಖಾತಾ ಸಂಖ್ಯೆ 242

11. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.46/30 ರಲ್ಲಿ 0.27 ಎಕರೆ ಖಾತಾ ಸಂಖ್ಯೆ 242

12. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.46/31 ರಲ್ಲಿ 0.03.08 ಎಕರೆ ಖಾತಾ ಸಂಖ್ಯೆ 127

13. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.58/1 ರಲ್ಲಿ 1.05 ಎಕರೆ ಖಾತಾ ಸಂಖ್ಯೆ 127

14. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.58/1 ರಲ್ಲಿ 1.25 ಎಕರೆ ಖಾತಾ ಸಂಖ್ಯೆ 127

15. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.58/1 ರಲ್ಲಿ 0.16 ಎಕರೆ ಖಾತಾ ಸಂಖ್ಯೆ 127

16. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.58/11 ರಲ್ಲಿ 0.15 ಎಕರೆ ಖಾತಾ ಸಂಖ್ಯೆ 62

17. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.98/3 ರಲ್ಲಿ 2.31.00 ಎಕರೆ ಖಾತಾ ಸಂಖ್ಯೆ 127

18. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.115 ರಲ್ಲಿ 1–10 ಎಕರೆ

19. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.115 ರಲ್ಲಿ 0–12 ಎಕರೆ

20. **ಷೆಡ್ಯೂಲ್ ಆಸ್ತಿ**

ಹುಲಿವಾನ ಗ್ರಾಮ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.55/2 ರಲ್ಲಿ 0.1 1/2 ಎಕರೆ

**21. Schedule property**

(LAND MARK) Re-Sy.No.58/11 (Old No.58/7), Hulivana Grama, Yadiyur Hobli, Kunigal Taluk. (Schedule A) Re-Sy.No.58/11 (Old No.58/7), Hulivana Grama, Yadiyur Hobli, Kunigal Taluk

Measuring 00 15.00.00 ಗುಂಟೆ ಖುಷ್ಕಿ ಜಮೀನು

East by : Channaiah's property
West by : H.G.H.Gangaiah's property
North by : Kodagaiah, Lakkanna's property
South by : Sy.No.58/7 – Sri Doddagangaiah, S/o.Patel Gangegowda's Property

**22. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.208/4 ರಲ್ಲಿ 0.16 ಎಕರೆ ಖಾತಾ ಸಂಖ್ಯೆ 273

**23. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.210 ರಲ್ಲಿ 3.06 ಎಕರೆ ಖಾತಾ ಸಂಖ್ಯೆ 273

**24. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.211/2 ರಲ್ಲಿ 0.28 ಎಕರೆ ಖಾತಾ ಸಂಖ್ಯೆ 273

**25. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.211/3 ರಲ್ಲಿ 0.09 ಎಕರೆ

**26. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.212/1 ರಲ್ಲಿ 0.38 ಎಕರೆ ಖಾತಾ ಸಂಖ್ಯೆ 271

**27. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.212/2 ರಲ್ಲಿ 0.37.08 ಎಕರೆ ಖಾತಾ ಸಂಖ್ಯೆ 271

**28. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.212/3 ರಲ್ಲಿ 0.37.08 ಎಕರೆ ಖಾತಾ ಸಂಖ್ಯೆ 271

**29. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.215/1 ರಲ್ಲಿ 1.01 ಎಕರೆ ಖಾತಾ ಸಂಖ್ಯೆ 273

**30. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.215/4 ರಲ್ಲಿ 0.21 ಎಕರೆ ಖಾತಾ ಸಂಖ್ಯೆ 273

**31.ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.228/4 ರಲ್ಲಿ 0.07 ಎಕರೆ ಖಾತಾ ಸಂಖ್ಯೆ 273

**32. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.230/1 ರಲ್ಲಿ 0.31 ಎಕರೆ ಖಾತಾ ಸಂಖ್ಯೆ 56

**33. Schedule property**

(LAND MARK) Sy.No.212, Kantanahalli Mavinahalli, Amanikere Grama, Yadiyur Hobli, Kunigal Taluk. (Schedule A) Sy.No.212, Kantanahalli Mavinahalli, Amanikere Grama, Yadiyur Hobli, Kunigal Taluk

ವಿಸ್ತೀರ್ಣ 2.33 ಗುಂಟೆ ತರಿ ಜಮೀನು

East by : ಸರ್ಕಾರಿ ಹಳ್ಳ

West by : ಜಿ.ಕೃಷ್ಣಮೂರ್ತಿ

North by : ಸಿದ್ಧಲಿಂಗಯ್ಯ ಮತ್ತು ಗಂಗೂಡರವರ ಜಮೀನು

South by : ಜಿ.ಕೃಷ್ಣಮೂರ್ತಿಯವರ ಜಮೀನು

**34. Schedule property**

(LAND MARK) Re-Sy.No.230/1, Kantanahalli Mavinahalli, Amanikere Grama, Yadiyur Hobli, Kunigal Taluk. (Schedule A) Re-Sy.No.230/1, Kantanahalli Mavinahalli, Amanikere Grama, Yadiyur Hobli, Kunigal Taluk

ವಿಸ್ತೀರ್ಣ 2.33 ಗುಂಟೆ ತರಿ ಜಮೀನು

East by : ಸರ್ಕಾರಿ ಹಳ್ಳ

West by : ಸರ್ಕಾರಿ ಹಳ್ಳ

North by : ಸರ್ವೆ ನಂ.230/2ರ ಜಮೀನು

South by : ಜಿ.ಕೃಷ್ಣಮೂರ್ತಿಯವರ ಸರ್ವೆ ನಂ.224 ರ ಜಮೀನು

**35. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.274 ರಲ್ಲಿ 0.1 ಎಕರೆ

**36. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.215/1 ರಲ್ಲಿ 0.1 ಎಕರೆ

**37. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.211/3 ರಲ್ಲಿ 1.05 ಎಕರೆ

**38. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.183/3 ರಲ್ಲಿ 0.22 ಎಕರೆ

**39. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.211/2 ರಲ್ಲಿ 0.28 ಎಕರೆ

**40. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.211/3 ರಲ್ಲಿ 3.06 ಎಕರೆ

**41. ಷೆಡ್ಯೂಲ್ ಆಸ್ತಿ**

ಕಂಠನಹಳ್ಳಿ ಮಾವಿನಹಳ್ಳಿ ಅ.ಕೆರೆ, ಯಡಿಯೂರು ಹೋಬಳಿ, ಕುಣಿಗಲ್ ತಾಲ್ಲೂಕು, ಇದರ ಸರ್ವೆ ನಂ.179/1 179/3, 179/4 ರಲ್ಲಿ 0–24 ಎಕರೆ

**42. SCHEDULE PROPERTY**

Vehicle bearing No.KA-04 MH 7230 - Hundai I 10 ASTA

**43. SCHEDULE PROPERTY**

Vehicle bearing No.KA-04 MM 6359 - Toyota Innova 2.5 Z (E4)

**44. SCHEDULE PROPERTY**

Vehicle bearing No.KA-02 MK 7245- S/RAPID ELEGANCE PLUS 1.6 MPI

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: –12–2016 ರಂದು ನೀಡಿರುತ್ತೇನೆ.

**ಡಿ.ಪಾಂಡುರಂಗ ಗರಗ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**P.R. No 42**
**SC. 10**

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬಿ.ಎಲ್.ಗೌಡ ಲೇಔಟ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ವಿಷಯ :** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಜಾನಕಲ್ ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :**
1. ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆ–227 ಸಂಖ್ಯೆ:ಆರ್‌ಸಿಎಸ್:40:ಎಲ್‌ಕ್ಯೂಡಿ: 2011–12, ದಿನಾಂಕ: 25–04–2012.
2. ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾಲ್ಲೂಕು ಇವರ ಪತ್ರ ಸಂ:ಸಅ/ಹೊ/ಸಮಾಪನೆ/ಸಿಆರ್/2016–17, ದಿನಾಂಕ: 27–10–2016.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30: ಸಮಾಪನೆ/ಸಿಆರ್–22/2016–17, ದಿನಾಂಕ:27–10–2016.

**ಪ್ರಸ್ತಾವನೆ :–**

ವಿಷಯಕ್ಕೆ ಸಂಬಂಧಿಸಿದಂತೆ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸದುರ್ಗ ಇವರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಜಾನಕಲ್, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ದಿನಾಂಕ: 10–04–2013ರಂದು ಸಂಖ್ಯೆ:ಸನಿ–30/ಆರ್‌ಎಸ್‌ಆರ್/45012/2013–14 ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕಿಂತ ಕಡಿಮೆದ್ದಾಗಿರುತ್ತದೆಂದು ಉಲ್ಲೇಖ(3)ರ ಪತ್ರದ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ವರದಿಸಿರುತ್ತಾರೆ.

ಮುಂದುವರೆದು ಪ್ರಸ್ತಾವೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿದ್ದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಹಾಗೂ ನಿಯಮ 1960 ಹಾಗೂ ಸಂಘದ ಉಪ ನಿಯಮಗಳ ರೀತ್ಯಾ ಕಾರ್ಯ ನಿರ್ವಹಿಸುವಲ್ಲಿ ಸಂಘವು ವಿಫಲವಾಗಿರುತ್ತದೆ. ಅಲ್ಲದೇ ಒಂದು ಸಹಕಾರ ಸಂಘವು ನಿರ್ವಹಿಸಬೇಕಾದ ಲೆಕ್ಕಪರಿಶೋಧನೆ, ವಾರ್ಷಿಕ ಮಹಾಸಭೆ, ಆಡಳಿತ ಮಂಡಳಿಗಳ ಸಭೆ, ಹಾಗೂ ಬೈಲಾ ಉದ್ದೇಶಗಳ ರೀತ್ಯಾ ಆಡಳಿತ ಮಂಡಳಿ ಚುನಾವಣೆ ಜರುಗಿಸುವಲ್ಲಿ ಸಂಘವು ಸಂಪೂರ್ಣ ವಿಫಲವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಂಘವು ಕಾರ್ಯನಿರತ ಸಂಘವಾಗಿ ಮುಂದುವರೆಯುವುದು ಸೂಕ್ತವಲ್ಲವೆಂದು ಪರಿಗಣಿಸಿ ಈ ಸಂಘವನ್ನು ಮಾರ್ಚ್ 2016 ರ ಅವಧಿಯಲ್ಲಿ ಸ್ಥಗಿತವೆಂದು ಘೋಷಣೆ ಮಾಡಿದೆ.

ಮುಂದುವರೆದು ಸಹಕಾರ ಕಾಯ್ದೆ 1959 ಕಲಂ 72 ರ ರೀತ್ಯಾ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ಬಗ್ಗೆ ಭಾರ್ಗವಿ ಟುಡೆ ದಿನ ಪತ್ರಿಕೆಯಲ್ಲಿ ದಿನಾಂಕ : 21–09–2016 ರಂದು ಪ್ರಕಟಣೆ ನೀಡಿ, ಸಂಘಕ್ಕೆ ಸಂಬಂಧಪಟ್ಟ ಸಂಘದ ಸದಸ್ಯರುಗಳಾಗಲೀ ಅಥವಾ ಆಡಳಿತ ಮಂಡಲಿ ಸದಸ್ಯರುಗಳಾಗಲೀ ಸಂಘವನ್ನು ಸಮಾಪನೆಗೊಳಿಸಲು ಏನಾದರೂ ಆಕ್ಷೇಪಣೆಗಳಿದ್ದಲ್ಲಿ 07 ದಿನದೊಳಗಾಗಿ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಅವಧಿಯಲ್ಲಿ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಬಾರದಿರುವ ಕಾರಣ ಸಂಘವನ್ನು ಪುನ:ಶ್ಚೇತನಗೊಳಿಸುವ ಸಾಧ್ಯತೆಗಳು ಇಲ್ಲದೇ ಇರುವುದನ್ನು ಪರಿಗಣಿಸಿ ಸದರಿ ಸಂಘವನ್ನು ಸಮಾಪನೆಗೊಳಿಸಿ ಮಾರ್ಗ ವಿಸ್ತರಣಾಧಿಕಾರಿ ಹೊಸದುರ್ಗ ತಾಲ್ಲೂಕು, ಶಿವಮೊಗ್ಗ ಹಾಲು ಒಕ್ಕೂಟ ನಿ.,

ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಕ ಮಾಡಲು ಉಲ್ಲೇಖ(3)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಮಾಡಿರುವ ಶಿಫಾರಸ್‌ನ್ನು ಪರಿಶೀಲಿಸಿ, ಸದರಿ ಸಹಕಾರ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಸಹಕಾರ ಸಂಘಗಳ ಉಪ ನಿಬಂಧಕರಿಗೆ ಅಧಿಕಾರ ದತ್ತವಾಗಿರುವುದರಿಂದ, ಈ ಮೇಲ್ಕಂಡ ಸಂಘವನ್ನು ಸಹಕಾರ ಕಾಯ್ದೆ, 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ: ಡಿಆರ್‌ಡಿ: ಸಮಾಪನೆ:ಸಿಆರ್: 19/2016-17, ದಿನಾಂಕ: 18-11-2016.**

ಕೆ.ಗೋಪಾಲರೆಡ್ಡಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸರ್ಕಾರದ ಅಧಿಸೂಚನೆ ನಂ:ಸಿಓ/139/ಸಿಎಲ್ಎಂ 2010, 17-02-2011 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಜಾನಕಲ್, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಕಲಂ 73 (1) ಅನ್ವಯ ಮಾರ್ಗ ವಿಸ್ತರಣಾಧಿಕಾರಿ ಹೊಸದುರ್ಗ ತಾಲ್ಲೂಕು ಶಿವಮೊಗ್ಗ ಹಾಲು ಒಕ್ಕೂಟ ನಿ., ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಈ ಕೂಡಲೇ ಸಂಘದ ಪ್ರಭಾರ ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(2) ಪ್ರಭಾರ ಪಡೆದು ಕಲಂ 74 ರ ರೀತ್ಯಾ ಹಾಗೂ ಉಲ್ಲೇಖ(1)ರ ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆಗೆ ಅನುಗುಣವಾಗಿ ಕ್ರಮವಿಟ್ಟು ಸಂಘದ ಆಸ್ತಿ-ಜವಾಬ್ದಾರಿ ವಿಲೇವಾರಿ ಮಾಡಿ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:18-11-2016 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬಿ.ಎಲ್.ಗೌಡ ಲೇಔಟ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ವಿಷಯ :** ಸ್ಥಗಿತಗೊಂಡಿರುವ ಶ್ರೀ ಲಕ್ಷ್ಮಿವೆಂಕಟೇಶ್ವರ ಕೈಮಗ್ಗ ನೇಕಾರರ ಉತ್ಪಾದನೆ ಮತ್ತು ಮಾರಾಟ ಸಹಕಾರ ಸಂಘ ನಿ., ಹಾಗಲಕೆರೆ, ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :**
1. ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆ-227ಸಂಖ್ಯೆ:ಆರ್‌ಸಿಎಸ್:40: ಎಲ್‌ಕ್ಯೂಡಿ:2011-12, ದಿನಾಂಕ: 25-04-2012.
2. ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾಲ್ಲೂಕು ಇವರ ಪತ್ರ ಸಂ:ಸಅ/ಹೊ/ಸಮಾಪನೆ/ಸಿಆರ್/2016-17, ದಿನಾಂಕ: 27-10-2016.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ/ಸಿಆರ್-19/2016-17, ದಿನಾಂಕ: 27-10-2016.

**ಪ್ರಸ್ತಾವನೆ :-**

ವಿಷಯಕ್ಕೆ ಸಂಬಂಧಿಸಿದಂತೆ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸದುರ್ಗ ಇವರು ಶ್ರೀ ಲಕ್ಷ್ಮಿವೆಂಕಟೇಶ್ವರ ಕೈಮಗ್ಗ ನೇಕಾರರ ಉತ್ಪಾದನೆ ಮತ್ತು ಮಾರಾಟ ಸಹಕಾರ ಸಂಘ ನಿ., ಹಾಗಲಕೆರೆ, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ದಿನಾಂಕ: 15-03-2012 ರಂದು ಸಂಖ್ಯೆ:ಸನಿ-30/ಆರ್‌ಎಸ್‌ಆರ್/28/42910/2011-12 ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕಿಂತ ಕಡಿಮೆದ್ದಾಗಿರುತ್ತದೆಂದು ಉಲ್ಲೇಖ(3)ರ ಪತ್ರದ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ವರದಿಸಿರುತ್ತಾರೆ.

ಮುಂದುವರೆದು ಪ್ರಸ್ತಾವೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿದ್ದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 ಹಾಗೂ ನಿಯಮ 1960 ಹಾಗೂ ಸಂಘದ ಉಪ ನಿಯಮಗಳ ರೀತ್ಯಾ ಕಾರ್ಯ ನಿರ್ವಹಿಸುವಲ್ಲಿ ಸಂಘವು ವಿಫಲವಾಗಿರುತ್ತದೆ. ಅಲ್ಲದೇ ಒಂದು ಸಹಕಾರ ಸಂಘವು ನಿರ್ವಹಿಸಬೇಕಾದ ಲೆಕ್ಕಪರಿಶೋಧನೆ, ವಾರ್ಷಿಕ ಮಹಾಸಭೆ, ಆಡಳಿತ ಮಂಡಳಿಗಳ ಸಭೆ, ಹಾಗೂ ಬೈಲಾ ಉದ್ದೇಶಗಳ ರೀತ್ಯಾ ಆಡಳಿತ ಮಂಡಳಿ ಚುನಾವಣೆ ಜರುಗಿಸುವಲ್ಲಿ ಸಂಘವು ಸಂಪೂರ್ಣ ವಿಫಲವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಂಘವು ಕಾರ್ಯನಿರತ ಸಂಘವಾಗಿ ಮುಂದುವರೆಯುವುದು ಸೂಕ್ತವಲ್ಲವೆಂದು ಪರಿಗಣಿಸಿ ಈ ಸಂಘವನ್ನು ಮಾರ್ಚ್ 2016 ರ ಅವಧಿಯಲ್ಲಿ ಸ್ಥಗಿತವೆಂದು ಘೋಷಣೆಮಾಡಿದೆ.

ಮುಂದುವರೆದು ಸಹಕಾರ ಕಾಯ್ದೆ, 1959 ಕಲಂ 72 ರ ರೀತ್ಯಾ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ಬಗ್ಗೆ ಭಾರ್ಗವಿ ಟುಡೆ ದಿನ ಪತ್ರಿಕೆಯಲ್ಲಿ ದಿನಾಂಕ : 21-09-2016 ರಂದು ಪ್ರಕಟಣೆ ನೀಡಿ, ಸಂಘಕ್ಕೆ ಸಂಬಂಧಪಟ್ಟ ಸಂಘದ ಸದಸ್ಯರುಗಳಾಗಲೀ ಅಥವಾ ಆಡಳಿತ ಮಂಡಲಿ ಸದಸ್ಯರುಗಳಾಗಲೀ ಸಂಘವನ್ನು ಸಮಾಪನೆಗೊಳಿಸಲು ಏನಾದರೂ ಆಕ್ಷೇಪಣೆಗಳಿದ್ದಲ್ಲಿ 07 ದಿನದೊಳಗಾಗಿ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಅವಧಿಯಲ್ಲಿ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಬಾರದಿರುವ ಕಾರಣ ಸಂಘವನ್ನು ಪುನ:ಶ್ಚೇತನಗೊಳಿಸುವ ಸಾದ್ಯತೆಗಳು ಇಲ್ಲದೇ

ಇರುವುದನ್ನು ಪರಿಗಣಿಸಿ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಕ ಮಾಡಲು ಉಲ್ಲೇಖ(3)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಮಾಡಿರುವ ಶಿಫಾರಸ್‌ನ್ನು ಪರಿಶೀಲಿಸಿ, ಸದರಿ ಸಹಕಾರ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಸಹಕಾರ ಸಂಘಗಳ ಉಪ ನಿಬಂಧಕರಿಗೆ ಅಧಿಕಾರ ದತ್ತವಾಗಿರುವುದರಿಂದ, ಈ ಮೇಲ್ಕಂಡ ಸಂಘವನ್ನು ಸಹಕಾರ ಕಾಯ್ದೆ 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ: ಡಿಆರ್‌ಡಿ: ಸಮಾಪನೆ:ಸಿಆರ್: 16/2016–17, ದಿನಾಂಕ: 18–11–2016.**

ಕೆ.ಗೋಪಾಲರೆಡ್ಡಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸರ್ಕಾರದ ಅಧಿಸೂಚನೆ ನಂ:ಸಿಓ/139/ಸಿಎಲ್ಎಂ2010, 17–02–2011 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಲಕ್ಷ್ಮಿವೆಂಕಟೇಶ್ವರ ಕೈ ಮಗ್ಗ ನೇಕಾರರ ಉತ್ಪಾದನೆ ಮತ್ತು ಮಾರಾಟ ಸಹಕಾರ ಸಂಘ ನಿ., ಹಾಗಲಕೆರೆ, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಕಲಂ 73 (1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಈ ಕೂಡಲೇ ಸಂಘದ ಪ್ರಭಾರ ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 73(2) ಪ್ರಭಾರ ಪಡೆದು ಕಲಂ 74 ರ ರೀತ್ಯಾ ಹಾಗೂ ಉಲ್ಲೇಖ(1)ರ ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆಗೆ ಅನುಗುಣವಾಗಿ ಕ್ರಮವಿಟ್ಟು ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿ ಮಾಡಿ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:18–11–2016 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬಿ.ಎಲ್.ಗೌಡ ಲೇಔಟ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ವಿಷಯ :** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕೊರಟಿಕೆರೆ ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :**
1. ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆ–227ಸಂಖ್ಯೆ:ಆರ್‌ಸಿಎಸ್: 40:ಎಲ್‌ಕ್ಯೂಡಿ:2011–12, ದಿನಾಂಕ: 25–04–2012.
2. ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾಲ್ಲೂಕು ಇವರ ಪತ್ರ ಸಂ:ಸಅ/ಹೊ/ಸಮಾಪನೆ/ಸಿಆರ್/2016–17, ದಿನಾಂಕ: 27–10–2016.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30: ಸಮಾಪನೆ/ಸಿಆರ್–21/2016–17, ದಿನಾಂಕ: 27–10–2016.

ಪ್ರಸ್ತಾವನೆ : –

ವಿಷಯಕ್ಕೆ ಸಂಬಂಧಿಸಿದಂತೆ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸದುರ್ಗ ಇವರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕೊರಟಿಕೆರೆ, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ದಿನಾಂಕ: 01–09–2001ರಂದು ಸಂಖ್ಯೆ:ಸನಿ–30/76/ಆರ್‌ಜಿಎನ್/30488/2001–02 ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆದ್ದಾಗಿರುತ್ತದೆಂದು ಉಲ್ಲೇಖ(3)ರ ಪತ್ರದ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ವರದಿಸಿರುತ್ತಾರೆ.

ಮುಂದುವರೆದು ಪ್ರಸ್ತಾವೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿದ್ದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಹಾಗೂ ನಿಯಮ 1960 ಹಾಗೂ ಸಂಘದ ಉಪ ನಿಯಮಗಳ ರೀತ್ಯಾ ಕಾರ್ಯ ನಿರ್ವಹಿಸುವಲ್ಲಿ ಸಂಘವು ವಿಫಲವಾಗಿರುತ್ತದೆ. ಅಲ್ಲದೇ ಒಂದು ಸಹಕಾರ ಸಂಘವು ನಿರ್ವಹಿಸಬೇಕಾದ ಲೆಕ್ಕಪರಿಶೋಧನೆ, ವಾರ್ಷಿಕ ಮಹಾಸಭೆ, ಆಡಳಿತ ಮಂಡಳಿಗಳ ಸಭೆ, ಹಾಗೂ ಬೈಲಾ ಉದ್ದೇಶಗಳ ರೀತ್ಯಾ ಆಡಳಿತ ಮಂಡಳಿ ಚುನಾವಣೆ ಜರುಗಿಸುವಲ್ಲಿ ಸಂಘವು ಸಂಪೂರ್ಣ ವಿಫಲವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಂಘವು ಕಾರ್ಯನಿರತ ಸಂಘವಾಗಿ ಮುಂದುವರೆಯುವುದು ಸೂಕ್ತವಲ್ಲವೆಂದು ಪರಿಗಣಿಸಿ ಈ ಸಂಘವನ್ನು ಮಾರ್ಚ್ 2016 ರ ಅವಧಿಯಲ್ಲಿ ಸ್ಥಗಿತವೆಂದು ಘೋಷಣೆಮಾಡಿದೆ.

ಮುಂದುವರೆದು ಸಹಕಾರ ಕಾಯ್ದೆ, 1959 ಕಲಂ 72 ರ ರೀತ್ಯಾ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ಬಗ್ಗೆ ಭಾರ್ಗವಿ ಟುಡೆ ದಿನ ಪತ್ರಿಕೆಯಲ್ಲಿ ದಿನಾಂಕ : 21–09–2016 ರಂದು ಪ್ರಕಟಣೆ ನೀಡಿ, ಸಂಘಕ್ಕೆ ಸಂಬಂಧಪಟ್ಟ ಸಂಘದ ಸದಸ್ಯರುಗಳಾಗಲೀ ಅಥವಾ ಆಡಳಿತ ಮಂಡಲಿ ಸದಸ್ಯರುಗಳಾಗಲೀ ಸಂಘವನ್ನು ಸಮಾಪನೆಗೊಳಿಸಲು ಏನಾದರೂ ಆಕ್ಷೇಪಣೆಗಳಿದ್ದಲ್ಲಿ 07 ದಿನದೊಳಗಾಗಿ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಅವಧಿಯಲ್ಲಿ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಬಾರದಿರುವ ಕಾರಣ ಸಂಘವನ್ನು ಪುನ:ಶ್ಚೇತನಗೊಳಿಸುವ ಸಾಧ್ಯತೆಗಳು ಇಲ್ಲದೇ ಇರುವುದನ್ನು ಪರಿಗಣಿಸಿ ಸದರಿ ಸಂಘವನ್ನು ಸಮಾಪನೆಗೊಳಿಸಿ **ಮಾರ್ಗ ವಿಸ್ತರಣಾಧಿಕಾರಿ ಹೊಸದುರ್ಗ ತಾಲ್ಲೂಕು, ಶಿವಮೊಗ್ಗ ಹಾಲು ಒಕ್ಕೂಟ ನಿ.,** ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಕ ಮಾಡಲು ಉಲ್ಲೇಖ(3)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಮಾಡಿರುವ ಶಿಫಾರಸ್‌ನ್ನು ಪರಿಶೀಲಿಸಿ, ಸದರಿ ಸಹಕಾರ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಸಹಕಾರ ಸಂಘಗಳ ಉಪ ನಿಬಂಧಕರಿಗೆ ಅಧಿಕಾರ ದತ್ತವಾಗಿರುವುದರಿಂದ, ಈ ಮೇಲ್ಕಂಡ ಸಂಘವನ್ನು ಸಹಕಾರ ಕಾಯ್ದೆ, 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ: ಡಿಆರ್‌ಡಿ: ಸಮಾಪನೆ:ಸಿಆರ್: 15/2016-17, ದಿನಾಂಕ: 18-11-2016.**

ಕೆ.ಗೋಪಾಲರೆಡ್ಡಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸರ್ಕಾರದ ಅಧಿಸೂಚನೆ ನಂ:ಸಿಓ/139/ಸಿಎಲ್‌ಎಂ2010, 17-02-2011 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕೊರಟಿಕೆರೆ, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಕಲಂ 73 (1) ಅನ್ವಯ **ಮಾರ್ಗ ವಿಸ್ತರಣಾಧಿಕಾರಿ ಹೊಸದುರ್ಗ ತಾಲ್ಲೂಕು ಶಿವಮೊಗ್ಗ ಹಾಲು ಒಕ್ಕೂಟ ನಿ.**, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಈ ಕೂಡಲೇ ಸಂಘದ ಪ್ರಭಾರ ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 73(2) ಪ್ರಭಾರ ಪಡೆದು ಕಲಂ 74 ರ ರೀತ್ಯಾ ಹಾಗೂ ಉಲ್ಲೇಖ(1)ರ ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆಗೆ ಅನುಗುಣವಾಗಿ ಕ್ರಮವಿಟ್ಟು ಸಂಘದ ಆಸ್ತಿ-ಜವಾಬ್ದಾರಿ ವಿಲೇವಾರಿ ಮಾಡಿ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ: 18-11-2016 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬಿ.ಎಲ್.ಗೌಡ ಲೇಔಟ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ವಿಷಯ :** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ದೇವಪುರ ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :**
1. ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆ-227 ಸಂಖ್ಯೆ:ಆರ್‌ಸಿಎಸ್:40: ಎಲ್‌ಕ್ಯೂಡಿ:2011-12, ದಿನಾಂಕ: 25-04-2012.
2. ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾಲ್ಲೂಕು ಇವರ ಪತ್ರ ಸಂ:ಸಅ/ಹೊ/ಸಮಾಪನೆ/ಸಿಆರ್/2016-17, ದಿನಾಂಕ: 27-10-2016.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ/ಸಿಆರ್-20/2016-17, ದಿನಾಂಕ:27-10-2016.

<u>ಪ್ರಸ್ತಾವನೆ</u> : –

ವಿಷಯಕ್ಕೆ ಸಂಬಂಧಿಸಿದಂತೆ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸದುರ್ಗ ಇವರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ದೇವಪುರ, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ದಿನಾಂಕ: 14-03-2014 ರಂದು ಸಂಖ್ಯೆ:ಸನಿ-30/ಆರ್‌ಸಿಎಸ್/45189/ಸಿಆರ್-50/2013-14 ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕಿಂತ ಕಡಿಮೆದ್ದಾಗಿರುತ್ತದೆಂದು ಉಲ್ಲೇಖ(3)ರ ಪತ್ರದ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ವರದಿಸಿರುತ್ತಾರೆ.

ಮುಂದುವರೆದು ಪ್ರಸ್ತಾವೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿದ್ದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಹಾಗೂ ನಿಯಮ 1960 ಹಾಗೂ ಸಂಘದ ಉಪ ನಿಯಮಗಳ ರೀತ್ಯಾ ಕಾರ್ಯ ನಿರ್ವಹಿಸುವಲ್ಲಿ ಸಂಘವು ವಿಫಲವಾಗಿರುತ್ತದೆ. ಅಲ್ಲದೇ ಒಂದು ಸಹಕಾರ ಸಂಘವು ನಿರ್ವಹಿಸಬೇಕಾದ ಲೆಕ್ಕಪರಿಶೋಧನೆ, ವಾರ್ಷಿಕ ಮಹಾಸಭೆ, ಆಡಳಿತ ಮಂಡಳಿಗಳ ಸಭೆ, ಹಾಗೂ ಬೈಲಾ ಉದ್ದೇಶಗಳ ರೀತ್ಯಾ ಆಡಳಿತ ಮಂಡಳಿ ಚುನಾವಣೆ ಜರುಗಿಸುವಲ್ಲಿ ಸಂಘವು ಸಂಪೂರ್ಣ ವಿಫಲವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಂಘವು ಕಾರ್ಯನಿರತ ಸಂಘವಾಗಿ ಮುಂದುವರೆಯುವುದು ಸೂಕ್ತವಲ್ಲವೆಂದು ಪರಿಗಣಿಸಿ ಈ ಸಂಘವನ್ನು ಮಾರ್ಚ್ 2016 ರ ಅವಧಿಯಲ್ಲಿ ಸ್ಥಗಿತವೆಂದು ಘೋಷಣೆಮಾಡಿದೆ.

ಮುಂದುವರೆದು ಸಹಕಾರ ಕಾಯ್ದೆ 1959 ಕಲಂ 72 ರ ರೀತ್ಯಾ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ಬಗ್ಗೆ ಭಾರ್ಗವಿ ಟುಡೆ ದಿನ ಪತ್ರಿಕೆಯಲ್ಲಿ ದಿನಾಂಕ : 21-09-2016 ರಂದು ಪ್ರಕಟಣೆ ನೀಡಿ, ಸಂಘಕ್ಕೆ ಸಂಬಂಧಪಟ್ಟ ಸಂಘದ ಸದಸ್ಯರುಗಳಾಗಲೀ ಅಥವಾ ಆಡಳಿತ ಮಂಡಲಿ ಸದಸ್ಯರುಗಳಾಗಲೀ ಸಂಘವನ್ನು ಸಮಾಪನೆಗೊಳಿಸಲು ಏನಾದರೂ ಆಕ್ಷೇಪಣೆಗಳಿದ್ದಲ್ಲಿ 07 ದಿನದೊಳಗಾಗಿ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಅವಧಿಯಲ್ಲಿ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಬಾರದಿರುವ ಕಾರಣ ಸಂಘವನ್ನು ಪುನ:ಶ್ಚೇತನಗೊಳಿಸುವ ಸಾಧ್ಯತೆಗಳು ಇಲ್ಲದೇ ಇರುವುದನ್ನು ಪರಿಗಣಿಸಿ ಸದರಿ ಸಂಘವನ್ನು ಸಮಾಪನೆಗೊಳಿಸಿ **ಮಾರ್ಗ ವಿಸ್ತರಣಾಧಿಕಾರಿ ಹೊಸದುರ್ಗ ತಾಲ್ಲೂಕು, ಶಿವಮೊಗ್ಗ ಹಾಲು ಒಕ್ಕೂಟ ನಿ.,** ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಕ ಮಾಡಲು ಉಲ್ಲೇಖ(3)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಮಾಡಿರುವ ಶಿಫಾರಸ್‌ನ್ನು ಪರಿಶೀಲಿಸಿ, ಸದರಿ ಸಹಕಾರ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಸಹಕಾರ ಸಂಘಗಳ ಉಪ ನಿಬಂಧಕರಿಗೆ ಅಧಿಕಾರ ದತ್ತವಾಗಿರುವುದರಿಂದ, ಈ ಮೇಲ್ಕಂಡ ಸಂಘವನ್ನು ಸಹಕಾರ ಕಾಯ್ದೆ, 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ: ಡಿಆರ್‌ಡಿ: ಸಮಾಪನೆ:ಸಿಆರ್: 14/2016–17, ದಿನಾಂಕ: 18–11–2016.**

ಕೆ.ಗೋಪಾಲರೆಡ್ಡಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸರ್ಕಾರದ ಅಧಿಸೂಚನೆ ನಂ:ಸಿಓ/139/ಸಿಎಲ್‌ಎಂ2010, 17–02–2011 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಹಾಲು ಉತ್ಪಾದಕರ ಸಹಕಾರ ಸಂಘ ನಿ., ದೇವಪುರ, ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಕಲಂ 73 (1) ಅನ್ವಯ **ಮಾರ್ಗ ವಿಸ್ತರಣಾಧಿಕಾರಿ ಹೊಸದುರ್ಗ ತಾಲ್ಲೂಕು ಶಿವಮೊಗ್ಗ ಹಾಲು ಒಕ್ಕೂಟ ನಿ.,** ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಈ ಕೂಡಲೇ ಸಂಘದ ಪ್ರಭಾರ ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 73(2) ಪ್ರಭಾರ ಪಡೆದು ಕಲಂ 74 ರ ರೀತ್ಯಾ ಹಾಗೂ ಉಲ್ಲೇಖ(1)ರ ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆಗೆ ಅನುಗುಣವಾಗಿ ಕ್ರಮವಿಟ್ಟು ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿ ಮಾಡಿ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:18–11–2016 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬಿ.ಎಲ್.ಗೌಡ ಲೇಔಟ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ವಿಷಯ :** ಸ್ಥಗಿತಗೊಂಡಿರುವ ಸರ್ಕಾರಿ ನೌಕರರ ಸಹಕಾರ ಸಂಘ ನಿ., ಹೊಸದುರ್ಗ ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :**
1. ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆ–227 ಸಂಖ್ಯೆ:ಆರ್‌ಸಿಎಸ್: 40: ಎಲ್‌ಕ್ಯೂಡಿ:2011–12, ದಿನಾಂಕ: 25–04–2012.
2. ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾಲ್ಲೂಕು ಇವರ ಪತ್ರ ಸಂ:ಸಅ/ಹೊ/ಸಮಾಪನೆ/ಸಿಆರ್/2016–17, ದಿನಾಂಕ: 27–10–2016.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30:ಸಮಾಪನೆ/ಸಿಆರ್–15/2016–17, ದಿನಾಂಕ: 27–10–2016.

ಪ್ರಸ್ತಾವನೆ : –

ವಿಷಯಕ್ಕೆ ಸಂಬಂಧಿಸಿದಂತೆ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸದುರ್ಗ ಇವರು ಸರ್ಕಾರಿ ನೌಕರರ ಸಹಕಾರ ಸಂಘ ನಿ., ಹೊಸದುರ್ಗ ಈ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ದಿನಾಂಕ:15–03–1943ರಂದು ಸಂಖ್ಯೆ:ಎಆರ್‌ಸಿ/32ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕಿಂತ ಕಡಿಮೆದ್ದಾಗಿರುತ್ತದೆಂದು ಉಲ್ಲೇಖ(3)ರ ಪತ್ರದ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ವರದಿಸಿರುತ್ತಾರೆ.

ಮುಂದುವರೆದು ಪ್ರಸ್ತಾವೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿದ್ದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಹಾಗೂ ನಿಯಮ 1960 ಹಾಗೂ ಸಂಘದ ಉಪ ನಿಯಮಗಳ ರೀತ್ಯಾ ಕಾರ್ಯ ನಿರ್ವಹಿಸುವಲ್ಲಿ ಸಂಘವು ವಿಫಲವಾಗಿರುತ್ತದೆ. ಅಲ್ಲದೇ ಒಂದು ಸಹಕಾರ ಸಂಘವು ನಿರ್ವಹಿಸಬೇಕಾದ ಲೆಕ್ಕಪರಿಶೋಧನೆ, ವಾರ್ಷಿಕ ಮಹಾಸಭೆ, ಆಡಳಿತ ಮಂಡಳಿಗಳ ಸಭೆ, ಹಾಗೂ ಬೈಲಾ ಉದ್ದೇಶಗಳ ರೀತ್ಯಾ ಆಡಳಿತ ಮಂಡಳಿ ಚುನಾವಣೆ ಜರುಗಿಸುವಲ್ಲಿ ಸಂಘವು ಸಂಪೂರ್ಣ ವಿಫಲವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಂಘವು ಕಾರ್ಯನಿರತ ಸಂಘವಾಗಿ ಮುಂದುವರೆಯುವುದು ಸೂಕ್ತವಲ್ಲವೆಂದು ಪರಿಗಣಿಸಿ ಈ ಸಂಘವನ್ನು ಮಾರ್ಚ್ 2016 ರ ಅವಧಿಯಲ್ಲಿ ಸ್ಥಗಿತವೆಂದು ಘೋಷಣೆಮಾಡಿದೆ.

ಮುಂದುವರೆದು ಸಹಕಾರ ಕಾಯ್ದೆ 1959 ಕಲಂ 72 ರ ರೀತ್ಯಾ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ಬಗ್ಗೆ ಭಾರ್ಗವಿ ಟುಡೆ ದಿನ ಪತ್ರಿಕೆಯಲ್ಲಿ ದಿನಾಂಕ : 21–09–2016 ರಂದು ಪ್ರಕಟಣೆ ನೀಡಿ, ಸಂಘಕ್ಕೆ ಸಂಬಂಧಪಟ್ಟ ಸಂಘದ ಸದಸ್ಯರುಗಳಾಗಲೀ ಅಥವಾ ಆಡಳಿತ ಮಂಡಲಿ ಸದಸ್ಯರುಗಳಾಗಲೀ ಸಂಘವನ್ನು ಸಮಾಪನೆಗೊಳಿಸಲು ಏನಾದರೂ ಆಕ್ಷೇಪಣೆಗಳಿದ್ದಲ್ಲಿ 07 ದಿನದೊಳಗಾಗಿ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಅವಧಿಯಲ್ಲಿ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಬಾರದಿರುವ ಕಾರಣ ಸಂಘವನ್ನು ಪುನ:ಶ್ಚೇತನಗೊಳಿಸುವ ಸಾಧ್ಯತೆಗಳು ಇಲ್ಲದೇ ಇರುವುದನ್ನು ಪರಿಗಣಿಸಿ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಕ ಮಾಡಲು ಉಲ್ಲೇಖ(3)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಮಾಡಿರುವ ಶಿಫಾರಸ್‌ನ್ನು ಪರಿಶೀಲಿಸಿ, ಸದರಿ ಸಹಕಾರ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಸಹಕಾರ ಸಂಘಗಳ ಉಪ ನಿಬಂಧಕರಿಗೆ ಅಧಿಕಾರ ದತ್ತವಾಗಿರುವುದರಿಂದ, ಈ ಮೇಲ್ಕಂಡ ಸಂಘವನ್ನು ಸಹಕಾರ ಕಾಯ್ದೆ 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ: ಡಿಆರ್‌ಡಿ: ಸಮಾಪನೆ:ಸಿಆರ್: 12/2016-17, ದಿನಾಂಕ: 18-11-2016.**

ಕೆ.ಗೋಪಾಲರೆಡ್ಡಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸರ್ಕಾರದ ಅಧಿಸೂಚನೆ ನಂ:ಸಿಓ/139/ಸಿಎಲ್‌ಎಂ2010, 17-02-2011 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸರ್ಕಾರಿ ನೌಕರರ ಸಹಕಾರ ಸಂಘ ನಿ., ಹೊಸದುರ್ಗ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಕಲಂ 73 (1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಈ ಕೂಡಲೇ ಸಂಘದ ಪ್ರಭಾರ ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(2) ಪ್ರಭಾರ ಪಡೆದು ಕಲಂ 74 ರ ರೀತ್ಯಾ ಹಾಗೂ ಉಲ್ಲೇಖ(1)ರ ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆಗೆ ಅನುಗುಣವಾಗಿ ಕ್ರಮವಿಟ್ಟು ಸಂಘದ ಆಸ್ತಿ-ಜವಾಬ್ದಾರಿ ವಿಲೇವಾರಿ ಮಾಡಿ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:18-11-2016 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬಿ.ಎಲ್.ಗೌಡ ಲೇಔಟ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ವಿಷಯ :** ಸ್ಥಗಿತಗೊಂಡಿರುವ ನೌಕರರ ಸಹಕಾರ ಸಂಘ ನಿ., ಬೆಲಗೂರು ಹೊಸದುರ್ಗ ತಾಲ್ಲೂಕು ಇದನ್ನು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ :** 1. ಮಾನ್ಯ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಸುತ್ತೋಲೆ-227 ಸಂಖ್ಯೆ:ಆರ್‌ಸಿಎಸ್:40: ಎಲ್‌ಕ್ಯೂಡಿ:2011-12, ದಿನಾಂಕ : 25-04-2012.

2. ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ತಾಲ್ಲೂಕು ಇವರ ಪತ್ರ ಸಂ:ಸಅ/ಹೊ/ಸಮಾಪನೆ/ಸಿಆರ್/2016-17, ದಿನಾಂಕ: 27-10-2016.

3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30: ಸಮಾಪನೆ/ಸಿಆರ್-17/2016-17, ದಿನಾಂಕ: 27-10-2016.

<u>ಪ್ರಸ್ತಾವನೆ</u> : -

ವಿಷಯಕ್ಕೆ ಸಂಬಂಧಿಸಿದಂತೆ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸದುರ್ಗ ಇವರು ನೌಕರರ ಸಹಕಾರ ಸಂಘ ನಿ., ಬೆಲಗೂರು ಹೊಸದುರ್ಗ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ದಿನಾಂಕ:21-12-1989ರಂದು ಸಂಖ್ಯೆ:ಸನಿ-31/16675 ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕಿಂತ ಕಡಿಮೆದ್ದಾಗಿರುತ್ತದೆಂದು ಉಲ್ಲೇಖ(3)ರ ಪತ್ರದ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ವರದಿಸಿರುತ್ತಾರೆ.

ಮುಂದುವರೆದು ಪ್ರಸ್ತಾವೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿದ್ದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಹಾಗೂ ನಿಯಮ 1960 ಹಾಗೂ ಸಂಘದ ಉಪ ನಿಯಮಗಳ ರೀತ್ಯಾ ಕಾರ್ಯ ನಿರ್ವಹಿಸುವಲ್ಲಿ ಸಂಘವು ವಿಫಲವಾಗಿರುತ್ತದೆ. ಅಲ್ಲದೇ ಒಂದು ಸಹಕಾರ ಸಂಘವು ನಿರ್ವಹಿಸಬೇಕಾದ ಲೆಕ್ಕಪರಿಶೋಧನೆ, ವಾರ್ಷಿಕ ಮಹಾಸಭೆ, ಆಡಳಿತ ಮಂಡಳಿಗಳ ಸಭೆ, ಹಾಗೂ ಬೈಲಾ ಉದ್ದೇಶಗಳ ರೀತ್ಯಾ ಆಡಳಿತ ಮಂಡಳಿ ಚುನಾವಣೆ ಜರುಗಿಸುವಲ್ಲಿ ಸಂಘವು ಸಂಪೂರ್ಣ ವಿಫಲವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಂಘವು ಕಾರ್ಯನಿರತ ಸಂಘವಾಗಿ ಮುಂದುವರೆಯುವುದು ಸೂಕ್ತವಲ್ಲವೆಂದು ಪರಿಗಣಿಸಿ ಈ ಸಂಘವನ್ನು ಮಾರ್ಚ್ 2016 ರ ಅವಧಿಯಲ್ಲಿ ಸ್ಥಗಿತವೆಂದು ಘೋಷಣೆಮಾಡಿದೆ.

ಮುಂದುವರೆದು ಸಹಕಾರ ಕಾಯ್ದೆ, 1959 ಕಲಂ 72 ರ ರೀತ್ಯಾ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ಬಗ್ಗೆ ಭಾರ್ಗವಿ ಟುಡೆ ದಿನ ಪತ್ರಿಕೆಯಲ್ಲಿ ದಿನಾಂಕ : 21-09-2016 ರಂದು ಪ್ರಕಟಣೆ ನೀಡಿ, ಸಂಘಕ್ಕೆ ಸಂಬಂಧಪಟ್ಟ ಸಂಘದ ಸದಸ್ಯರುಗಳಾಗಲೀ ಅಥವಾ ಆಡಳಿತ ಮಂಡಲಿ ಸದಸ್ಯರುಗಳಾಗಲೀ ಸಂಘವನ್ನು ಸಮಾಪನೆಗೊಳಿಸಲು ಏನಾದರೂ ಆಕ್ಷೇಪಣೆಗಳಿದ್ದಲ್ಲಿ 07 ದಿನದೊಳಗಾಗಿ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಅವಧಿಯಲ್ಲಿ ಯಾರಿಂದಲೂ ಯಾವುದೇ ಆಕ್ಷೇಪಣೆಗಳು ಬಾರದಿರುವ ಕಾರಣ ಸಂಘವನ್ನು ಪುನ:ಶ್ಚೇತನಗೊಳಿಸುವ ಸಾದ್ಯತೆಗಳು ಇಲ್ಲದೇ ಇರುವುದನ್ನು ಪರಿಗಣಿಸಿ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸದುರ್ಗ ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಕ ಮಾಡಲು ಉಲ್ಲೇಖ(3)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ ಇವರು ಮಾಡಿರುವ ಶಿಫಾರಸ್‌ನ್ನು ಪರಿಶೀಲಿಸಿ, ಸದರಿ ಸಹಕಾರ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಸಹಕಾರ ಸಂಘಗಳ ಉಪ ನಿಬಂಧಕರಿಗೆ ಅಧಿಕಾರ ದತ್ತವಾಗಿರುವುದರಿಂದ, ಈ ಮೇಲ್ಕಂಡ ಸಂಘವನ್ನು ಸಹಕಾರ ಕಾಯ್ದೆ, 1959 ಕಲಂ 72(2) ರನ್ವಯ ಸಮಾಪನೆಗೊಳಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

